# ಅರ್ಪಣೆ



ಶ್ರೀ ಶ್ರೀ ಶ್ರೀ ನಿತ್ಯಾನಂದ ಅವಧೂತರ
ಚರಣ ಕಮಲಗಳಲ್ಲಿ

# ಕೈವಲ್ಯ ಚಿಂತಾಮಣಿ

ಪ್ರಥಮ ಮುದ್ರಣ 2000 ಪ್ರತಿಗಳು

ಬೆಲೆ - ಹತ್ತು ರೂಪಾಯಿಗಳು

-ಮುದ್ರಕರು-

ಶ್ರೀ ರಾಘವೇಂದ್ರ ಪ್ರಿಂಟರ್ಸ್, ಹಿರಿಯೂರು



ಗ್ರಂಥಕರ್ತರು

ಶ್ರೀ ಗೋವಿಂದಪ್ಪ

ಹಿರಿಯೂರು

# ವಿಷಯಾನು ಕ್ರಮಣಿಕೆ

# ಮುನ್ನುಡಿ

ಶ್ರೀಮಾನ್ ಗೋವಿಂದಪ್ಪನವರು ವೃತ್ತಿಯಲ್ಲಿ ವಿಭಿನ್ನ ಕ್ಷೇತ್ರದಲ್ಲಿದ್ದರೂ ಸಹಾ ಸರ್ವದಾ ತನ್ನ ತನವನ್ನು ತನ್ನದಾಗಿರಿಸಿ ಕೊಳ್ಳದೇ, ಚಿನ್ಮಯನಲ್ಲಿ ಬೆರೆಯುವ ಹಂಬಲದೊಡನೆ ಸದಾ ಶ್ರೀ ಗುರು ನಿತ್ಯಾನಂದರ ಶಿಷ್ಯರಾದ ಶ್ರೀ ಗುರು ಕರೀಂಪೀರ್ ಚಂದ್ರರ ನೆನಕೆಯ ನೆಮಲುತಲಿ ನೆರಳಂತೆ ನಡೆಯುತಲಿ ಶ್ರೀ ಗುರು ಸ್ಮರಣಾಭಾವವು ಕಾಯದೊಳು ಹೊಮ್ಮಿ ಹೊರಚಲ್ಲಿ ರಂಜನೀಯ ರಾಗವಾಗಿ ಸಂಗ ಶರಣರಿಗೆ ನಾಂದಿಯಾಗಿ ಮೈತಳೆದು ಕೃತಿ ರೂಪ ಹೊಂದಿ ಕಾವ್ಯಧಾರೆ ಹರಿಸಿದೆ. ಈ ಕಾವ್ಯಗಳು ದೇವರಿರುವ, ಭಾವವರಿವ, ಭವಿತವ್ಯದ ನಂದಾದೀಪದಂತೆ ಮೂಡಿ ಬಂದಿದೆ.

ಪ್ರಪ್ರಥಮದಲ್ಲಿ ಕೃತಿಕಾರರು ವರಸಿದ್ಧಿ ವಿನಾಯಕನ ವರ ಪಡೆಯಲು ಧ್ಯಾನಿಸಿ ವೀಣಾಪಾಣಿ ಸರಸ್ವತಿಯ ಸ್ಮರಣೆಗೈದು ಶ್ರೀ ಅಷ್ಟಲಕ್ಷ್ಮಿ ಸ್ವರೂಪಿ ಅನ್ನದಾತೆ. ಆದಿಲಕ್ಷ್ಮಿಯ ನೆನಕೆಯಲ್ಲಿ ಜಗದೊಡತಿ ತ್ರಿಗುಣಂಗಳ ಮಾತೆ ಪ್ರಕೃತಿ ರೂಪಿ ಪಾವನಾತೀತೆ ಪರಾಶಕ್ತಿ ಅಂಬೆಯ ಧ್ಯಾನದಿ ಶ್ರೀ ಗುರು ಕರೀಂಪೀರ್ ಚಂದ್ರರನ್ನು-

**"ಚಂದ್ರಯ್ಯ ಮಾತನಾಡೋ ಕರೀಂಪೀರ್**
**ಚಂದ್ರಯ್ಯ ಮಾತನಾಡೋ"**

ಎಂದು ನುಡಿಸುತ್ತಾ ಗುರುವಿನಲ್ಲಿರುವ ಭಕ್ತಿ ಭಾವವನ್ನು ಬಿಂಬಿಸಿರುತ್ತಾರೆ.

ಗುರು ಪೌರ್ಣಮಿಯ ಮಹತ್ವವನ್ನು ಪರಿಪರಿಯಲ್ಲಿ ಪೃಥ್ವಿಗೆ ಪ್ರಚುರ ಪಡಿಸುತ್ತಾ, ಮಾಯಾ ಮೋಹದ ಪರೆಯಲ್ಲಿ ಪ್ರಪಂಚವ ಮರೆತು ನಡೆಯುವ ಮನುಜರನ್ನು ಎಚ್ಚರಿಸುವ "ಯಾಕೆ ಕುಣಿಯುತಿಯೋ ಹೇಳೋ ಮನುಜಾ" ಎಂಬುದರಲ್ಲಿ ಸಾರವತ್ತಾಗಿ ಬಣ್ಣಿಸಿ ಮಾಂಸ

ಮಜ್ಜದಿಂದ ಕೂಡಿದ "ದೇಹ ಭಾವಕ್ಕೆ ಅಂತ್ಯದೊಳು ಅಂಟಿ ಬರುವುದು ಪರಿನಾಮವೊಂದೆ" ಎಂದು ಎಳೆ ಎಳೆಯಾಗಿ ಹಿಂಜಿ ಬಿಂಬಿಸಿದ್ದಾರೆ.

ಇನ್ನು ಮುಂದುವರೆಯುತ್ತಾ ಗುರುವಿನಡಿಯಲ್ಲಿ ಸಮರ್ಪಣೆ ಭಾವದಿ ತನ್ನ ತನವ ಸಮರ್ಪಿಸಿಕೊಳ್ಳುತ್ತಾ ಯೋಗಿವರ್ಯನ ಅರಿವ ಅರಿತು ಭೂರಿ ಗುಣಗಳ ಪಡೆವ ಸಂತದಾರಿಯ ತೋರುವ ಯತೀಂದ್ರನ ಸ್ಮರಿಸಿ ಶ್ರೀ ಗುರುವನ್ನು ಭಕ್ತಿ ಭಾವದಿ ಭಕ್ತರು ಕೂಡಿ "ತೂಗಿರಿ ಗುರುವರ್ಯನ ತ್ರಿಮೂರ್ತಿ ಸ್ವರೂಪಿ ಗುರುಬ್ರಹ್ಮನ" ಎಂದು ದ್ವಿಪದಿಯಲ್ಲಿ ಕೂಡಿಸಿದ್ದಾರೆ.

ಅಂಗೈ ಒಳಗೆ ಲಿಂಗವ ಕಂಡು ಭ್ರಮಿಸುವ ಮಂಗ ಅಂಗದೊಳಗಿನ ಅಭಂಗವ ಕಾಣಿರೆಂದು

**"ಲಿಂಗಾವ ನೋಡಿರಣ್ಣಾ ಸಾಧುಗಳೆಲ್ಲಾ**
**"ಲಿಂಗಾವ ನೋಡಿರಣ್ಣಾ"**

ಎಂಬುದರಲ್ಲಿ ವಿಸ್ತರಿಸಿದ್ದಾರೆ.

ನಿತ್ಯ, ಸತ್ಯ, ತತ್ವ ತೋರ್ವನಾದ ರೂಪದಿ ನರನಾಡಿಯಲ್ಲಿ ಹರಿವುದ ಕೇಳುವ ಕೀಲಿನಿರಿಮೆಯ ಬಿತ್ತರಿಸುತ್ತಾ, ಅಧ್ಯಾತ್ಮ ಪಾರಮಾರ್ಥ ಪ್ರತಿ ಪತ್ತಿ ರೂಪದಿ ಹರಿಯುವ ಹಾವಿನ ಭಾವವ

**"ಹಾವನ್ನು ತುಳಿಯ ಬೇಕೂ ಮನುಜಾ**
**ಜೀವ ಭಾವವ ಕಳೆಯ ಬೇಕೂ"**

ಎಂಬುದರಲ್ಲಿ ವಿವರಿಸಿದ್ದಾರೆ ಮತ್ತು ಯೋಗಿವರ್ಯರ ಯೋಗದೀಕ್ಷೆಯ ದಿಟ್ಟಹೆಜ್ಜೆಯ ಧೀರೋದ್ದಾರ ಬಾಳಬಟೆಯ ಸಾರಸತ್ವಯುಕ್ತ

**"ರತ್ನಾವ ನೋಡಿರಣ್ಣಾ ಜೀವನುಎನಿಪ**
**ರತ್ನಾವ ನೋಡಿರಣ್ಣಾ"**

ಎನ್ನುವುದರಲ್ಲಿ ವಿಷದೀಕರಿಸಿದ್ದಾರೆ.

ಮೌಕ್ತಿಕ ಮುಕ್ತಿ ದೊರೆಯುವದಾರಿ ಗುರುಕರಣ ಧಾರಣದಿಂದ ಮಾತ್ರ

ಎಂಬುದನ್ನು ಚತುಷ್ಪದಿಯಲ್ಲಿ ಹೇಳಿರುತ್ತಾರೆ ಮತ್ತು "ಕ್ಷಣವು ಕ್ಷಣವು ಶಿವನ ಸ್ಮರಣೆ ಮಾಡಬೇಕೆಂದು ಇದೆಲ್ಲಕ್ಕೂ ಸರ್ವತತ್ವ, ತತ್ವ, ಸೋಪಾನವಾದ ಮುಕ್ತಿ ಮಾರ್ಗಕ್ಕೆ ಗುರು ಕೃಪೆ ಸ್ವಾಧಿಷ್ಠಾನ ಗುರುಕರುಣೆ ಸ್ಮರಣೆಯಿಂದ ಮಾತ್ರ ಸಾಧ್ಯವೆಂಬುದು ವಿಭಿನ್ನ ರೀತಿಯ ಕೃತಿ ಸಂಕಲನದಲ್ಲಿ ಭಿನ್ನ ಭಿನ್ನ ಧಾಟಿಯಲ್ಲಿ ರಾಗ, ತಾಳ ಬದ್ಧವಾಗಿ ಹಾಡಿ ನಲಿದು ನಲಿಸಲು ಸುಶ್ರಾವ್ಯ ಸಂಗೀತ ರೂಪಕಗಳಾಗಿ ಈ ಸಂಕಲನದಲ್ಲಿ ಮೂಡಿಸಿದ್ದಾರೆ.

ಹಿಂದೆ ತಪಸ್ವಿಗಳಾದ ಮೃಕಂಡುವಿನ ಪುತ್ರ ಮಾರ್ಕಂಡೇಯನು ರಚಿಸಿದ ಪರಿಯಲ್ಲಿ ಶ್ರೀ ನಿತ್ಯಾನಂದ ಕವಚವನ್ನು ರಚಿಸಿದ್ದಾರೆ. ಇದನ್ನು ಕೇಳಲು ಮನಸ್ಸಿಗೆ ಉಲ್ಲಾಸವಾದಂತಿದೆ ಹಾಗೂ ಹಿಂದೆ ಮಹೇಂದ್ರನಾಥನು ರಚಿಸಿರುವಂತೆ ಅಷ್ಟಕ ರೂಪದಲ್ಲಿ ಶ್ರೀ ನಿತ್ಯಾನಂದಾಷ್ಟಕವನ್ನು ರಚಿಸಿದ್ದಾರೆ. ಇದನ್ನು ಹಾಡಲು ತಾಳ, ಲಯ ಬದ್ಧವಾಗಿದೆ.

ಶ್ರೀ ಗುರು ನಿತ್ಯಾನಂದರ ಸುಪ್ರಭಾತ ಕಾಯದ ಕಸರ ಕಳೆಯುವ ಕಾಯ ಕಲ್ಪ ಗುರು ಸ್ಮರಣೆ ಮಾತ್ರದಿಂದ ಸಾಧ್ಯ - ಇದು ಸತ್ಯ, ನಿತ್ಯ, ಸ್ತುತ್ಯ.

ಜಗದರಿವ, ಜೀವದಿರುವ, ಭಾವವಿರುವ ಭವಿತವ್ಯಕ್ಕಿರುವ ಭವ್ಯ ಬಾಂದಳ ಸೇತುವೆಯೇ ಗುರುಸ್ಮರಣೆ ಎಂಬುದು ತತ್ವ ಭರಿತ, ಸತ್ವಸಹಿತ, ಕ್ಲಿಷ್ಟರಹಿತ, ಸರಳ ಸುಂದರ ಸಂಗೀತ ರೂಪಕವಾಗಿ ಶ್ರೀ ನಿತ್ಯಾನಂದರ ಆತ್ಮಮಂದಿರ ತೋರುವ ಸುಪ್ರಭಾತ ಸುಶ್ರಾವ್ಯವಾಗಿ ಕೃತಿ ಕರ್ತುವಿನ ಲೇಖನಿಯಲ್ಲಿ ಮೂಡಿ ಬಂದಿದೆ. ಇಂಥಾ ಕೃತಿ ಪಠನ ಶ್ರವಣ ಪ್ರತ್ಯೂಷಕ್ಕೂ ಪ್ರಸ್ತುತ ಅತ್ಯವಶ್ಯ ಜೀವನ ಮೌಲ್ಯ, ಜೀವರ ಲಕ್ಷಣ, ಜೀವರ ಸೂತ್ರವನ್ನೊಳಗೊಂಡ ಕಾಯ ಕರ್ಮ ಬಿಂಬಿಸುವ ಜೀವ ಲಕ್ಷಣ ಜೀವನ ಸೂಕ್ಷ್ಮತೆಯನ್ನು "ಕೋಲೂ ಕೋಲೆನ್ನಿರೆ" ಎಂಬುದರಲ್ಲಿ ಚಿತ್ರರಿಸಿದ್ದಾರೆ.

ಈ ಮೇಲಿನೆಲ್ಲಾ ಕೃತಿಗಳು ಚಿದ್ರೂಪಿ, ಚಿನ್ಮಯಸ್ವರೂಪಿ ಶ್ರೀ ಗುರು ನಿತ್ಯಾನಂದರ ಮತ್ತು ಶ್ರೀ ಕರೀಂಪೀರ್ ಚಂದ್ರರ

ಲೀಲೆಯನ್ನರಹುವ ರೂಪಕಗಳಾಗಿವೆ. ಇಂಥಾ ಇನ್ನೂ ಅನೇಕಾನೇಕ ಕೃತಿ, ಕವನಗಳನ್ನು ರಚಿಸಿ ಜನತೆಗೆ ಕೊಡಲೆಂದು ಅವರಿಗೆ ಶ್ರೀ ಗುರು ಪ್ರಜ್ಞಾಶಕ್ತಿ ದಯಪಾಲಿಸಲೆಂದು ಶ್ರೀ ಗುರುಗಳನ್ನು ಸ್ಮರಿಸಿ ಶುಭ ಕೋರುವ

ದಿನಾಂಕ : 19-11-1995

ಪುಟ್ಟಪ್ಪ
ಬೆಳಗೆರೆ

# ಲೇಖಕರ ಮಾತು

ಭಾರತ ದೇಶದಲ್ಲಿ ಅನೇಕ ಸಂತರು ಬಂದು ಹೋಗಿದ್ದಾರೆ. ಇವರಲ್ಲಿ ಸಿದ್ದಪುರುಷರೆಂದರೆ ತಪಶ್ಶಕ್ತಿಯನ್ನು ಪ್ರಜ್ವಲಿಸಿ ತಪಶ್ಶಕ್ತಿ ಪ್ರಭಾವದಿಂದ ಲೋಕದಲ್ಲಿ ಅಧರ್ಮವನ್ನು ನಾಶ ಮಾಡಿ ಧರ್ಮವನ್ನು ಉದ್ಧಾರ ಮಾಡುವುಕ್ಕೋಸ್ಕರವೇ ಮಾನವ ಜನ್ಮದಲ್ಲಿ ಜನಿಸಿದ್ದಾರೆ. ಜಗತ್ತಿನ ಆಗುಹೋಗುಗಳಲ್ಲಿ ಭಾಗಿಯಾಗಿ ಜನರ ನೋವು ನಲಿವುಗಳನ್ನು ಕಂಡ ಅನುಭವವನ್ನೇ ತತ್ವರೂಪದಲ್ಲಿ ಬರೆದಿರುವರು. ಇದಕ್ಕೆ ಹಿಂದಿನ ಅನೇಕ ಸಂತರು ತಮ್ಮ ಅನುಭವವನ್ನೇ ಸಾಮಾನ್ಯ ಜನರಿಗೆ ಅರ್ಥವಾಗುವಂತೆ ತೋರಿಸಿ ಅವರ ಕಷ್ಟಗಳಲ್ಲಿ ಭಾಗಿಯಾಗಿರುವರು. ಅವರು ಸಾಕ್ಷಾತ್ ಶಿವಸ್ವರೂಪವೆಂದು ಹೇಳಬಹುದು. ಗುರುಗಳ ತಪಶ್ಶಕ್ತಿ ಪ್ರಭಾವವೆಂದರೆ ವರ್ಣಿಸಲು ಅಸಾಧ್ಯವಾದುದು. ಇದಕ್ಕೆ ಹಿಂದೆ ತಪಸ್ವಿಗಳು ಹೇಳಿರುವ ಪ್ರಕಾರ

**"ನೋಡಿದುದೆಲ್ಲಾ ಲಕ್ಷ್ಯ ಮಾತಾಡಿದುದೆಲ್ಲ ಮಂತ್ರ**
**ರೂಢಿಯೊಳಗಮನಸ್ಕ ಯೋಗಿಗೆ"**

ಅದರಂತೆ ಶ್ರೀ ಶ್ರೀ ಶ್ರೀ ನಿತ್ಯಾನಂದರು ಯಾರನ್ನು ದೃಷ್ಟಿಸಿ ನೋಡಿದರೂ ಅವರೆಲ್ಲಾ ಧನ್ಯರಾಗಿರುವರು. ದೃಷ್ಟಿಸಿ ನೋಡಿದವರಿಗೆ ತಪಶ್ಶಕ್ತಿ ಪ್ರಭಾವವು ದೇಹದೊಳಗೆ ಸಂಚರಿಸಿ ಸಾಕ್ಷಾತ್ ಗುರುಸ್ವರೂಪರಂತೆ ಆಗಿರುವರು. ಅವರು ಯಾವ ವಾಕ್ಯವನ್ನೇ ಆಡಿದರೂ ಅದು ಮಂತ್ರ ಸ್ವರೂಪವಾಗಿ ಜಗತ್ತಿನಲ್ಲಿ ತೋರಿರುವುದು. ಅವರ ವಾಣಿ ಹೊರಟ ತಕ್ಷಣವೇ ಭಕ್ತರ ಇಚ್ಛೆಗಳು ತನಗೆ ತಾನೇ ನೆರವೇರುವವು. ಭಕ್ತರ ಇಷ್ಟಾರ್ಥಗಳು ಪೂರ್ಣಗೊಂಡು ನಿತ್ಯ ಆನಂದಮಯರನ್ನಾಗಿ ಮಾಡಿರುವರು. ಇದರಲ್ಲಿ ಸಂಶಯವೇ ಇಲ್ಲ. ಇದು ಪ್ರತ್ಯಕ್ಷ ಪ್ರಮಾಣವಾದ ವಿಚಾರ. ಇವರ ಕೃಪಾದೃಷ್ಟಿಗೆ ಬಿದ್ದವರೆಲ್ಲಾ ಧನ್ಯರು. ಅಸಮಾನವಾದ ತಪಶ್ಶಕ್ತಿ ಇವರದು. ಇಂಥಾ ತಪಸ್ವಿಸಿದ್ದರ ಕೃಪಾದೃಷ್ಟಿಗೆ ಬಿದ್ದವರೆಂದರೆ ಶ್ರೀ ಶ್ರೀ ಕರೀಂಪೀರ್ ಚಂದ್ರರು. ಇವರೇ ನಿತ್ಯಾನಂದ ಗುರುಗಳ ಕಿರಿಯ ಶಿಷ್ಯರು.

ಶ್ರೀ ಶ್ರೀ ಶ್ರೀ ನಿತ್ಯಾನಂದ ಗುರುಗಳು ಶ್ರೀ ಶ್ರೀ ಕರೀಂಪೀರ್ ಚಂದ್ರುರನ್ನು ದೃಷ್ಟಿಸಿ ನೋಡಿದ ತಕ್ಷಣವೇ ಶ್ರೀ ಶ್ರೀ.ಕರೀಂಪೀರ್‌ಚಂದ್ರುರಿಗೆ ಕಣ್ಣುಗಳು ಕೆಂಪಾಗಿ ರಕ್ತ ಸುರಿಯುವಂತೆ ನೋವುಗಳಿಂದ ತುಂಬಿ ಮೂರು ದಿವಸಗಳ ಕಾಲ ಬಹುಯಾತನೆಯಾಯಿತು. ಶ್ರೀ ಶ್ರೀ ಶ್ರೀ ನಿತ್ಯಾನಂದ ಅವಧೂತರ ತಪಶ್ಶಕ್ತಿಪ್ರಭಾವದಿಂದ ಸಕಲ ಸಂಶಯಗಳು ನಿವೃತ್ತಿಯಾಗಿ ಸದಾಧ್ಯಾನ ಚಿತ್ತರಾದರು. ಸದಾಕಾಲದಲ್ಲೂ ಶಾಂತಿಯನ್ನು ಕಾಪಾಡಿಕೊಂಡು ಬಂದರು. ಇವರು ಬಹಳ ಕೃಪಾಸಿದ್ದರಾಗಿ ಶಿಷ್ಯರನ್ನು ಸದಾ ತಪಶ್ಶಕ್ತಿ ಪ್ರಭಾವದಿಂದಲೇ ಕಾಪಾಡಿದವರು. ತ್ಯಾಗ ಜೀವಿಗಳಾಗಿ ಆಯುರ್ವೇದ ಔಷಧ ವೃತ್ತಿಯಿಂದ ಜೀವನ ಸಾಗಿಸಿ ಯಾರಿಗೂ ಹೊಣೆಯಾಗದಂತೆ ನಡೆದುಕೊಂಡರು. ಮೈಸೂರಿನ ಚಾಮುಂಡಿ ಬೆಟ್ಟದ ಪಾದದ ಬಳಿಯಲ್ಲಿ ಶ್ರೀ ಶ್ರೀ ಶ್ರೀ ನಿತ್ಯಾನಂದ ಆಶ್ರಮವನ್ನು ನಿರ್ಮಿಸಿ ಅನೇಕ ವಿಧವಾದ ತತ್ವಗಳನ್ನು ರಚಿಸಿ ರಾಜಯೋಗ ದಿವ್ಯವಾಣಿ ಮತ್ತು ರಾಜಯೋಗ ರಹಸ್ಯಗಳನ್ನು ರಚಿಸಿ ಸಾಮಾನ್ಯ ಜನರ ಮನಸ್ಸಿನಲ್ಲಿ ಯೋಗ ಸೂತ್ರವು ನಿಲ್ಲುವಂತೆ ಮಾಡಿದ್ದಾರೆ. ಇವರು ಗುರುಗಳಿಂದ ಪಡೆದ ತಪಶ್ಶಕ್ತಿ ಪ್ರಭಾವ ಮತ್ತು ಯೋಗ ಸೂತ್ರದ ಅನುಭವಗಳನ್ನು ತಮ್ಮ ತತ್ವಗಳಲ್ಲಿ ನಿರೂಪಿಸಿರುವರು. ಸಾಧಕನು ಯಾವ ಯಾವ ಮಾರ್ಗದಲ್ಲಿ ನಡೆದರೆ ಏನಾಗುವುದೆಂಬ ಅನುಭವಗಳನ್ನು ವಿವರಿಸಿ ಸಾಧಕರಿಗೆ ಸುಲಭವಾಗಿ ಅರ್ಥವಾಗುವಂತೆ ತಿಳಿಸಿದರು.

ಇಂಥಾ ಗುರುದ್ವಯರುಗಳ ಕೃಪಾದೃಷ್ಟಿ ಮಾತ್ರದಿಂದ ಅಜ್ಞಾನಿಯಾದ ನನಗೆ ಜ್ಞಾನ ದೃಷ್ಟಿಯನ್ನು ನೀಡಿ ನನ್ನ ಹೃದಯ ಕಮಲದಲ್ಲಿ ಗುರುದ್ವಯರುಗಳೇ ಸೇರಿ ಶ್ರೀ ನಿತ್ಯಾನಂದ ಅವಧೂತರ ಸುಪ್ರಭಾತ, ಶ್ರೀ ನಿತ್ಯಾನಂದಾಷ್ಟಕ, ಶ್ರೀ ನಿತ್ಯಾನಂದ ಕವಚ ಹಾಗೂ ತತ್ವಪದಗಳನ್ನು ರಚಿಸುವಂತೆ ಮಾಡಿದ್ದಾರೆ. ನನ್ನ ಹೃದಯದಲ್ಲಿಗುರುಗಳು ನೆಲಸಿದ ಮೇಲೆ ಈ ಅನಿಸಿಕೆಗಳು ಬಂದು ಈ ಕಿರುಹೊತ್ತಿಗೆಯನ್ನು ಬರೆಯುವಂತೆ ಮಾಡಿದ್ದಾರೆ.

ಈ ಹಿಂದೆ ವಿಚಾರ ರೂಪವಾಗಿ "ಗುರುಶಿಷ್ಯ ಜ್ಞಾನ ಚೂಡಾಮಣಿ" ಕಿರುಹೊತ್ತಿಗೆಯನ್ನು ರಚಿಸಿ ಸಾಮಾನ್ಯಜನರಲ್ಲಿ ಭಕ್ತಿ ಜ್ಞಾನ ವೈರಾಗ್ಯ ಮೂಡುವಂತೆ ಅವಕಾಶ ಕಲ್ಪಿಸಿಕೊಟ್ಟರು. ರಾಜಯೋಗಸಾರವೆಂಬ "ಭಾಮಿನಿ ಷಟ್ಪದಿ ರೂಪದಲ್ಲಿ ರಚಿತವಾದ ಕಿರುಹೊತ್ತಿಗೆಯನ್ನು ರಚಿಸುವಂತೆ ಮಾಡಿ ಭಕ್ತ ವೃಂದದಲ್ಲಿ ಹೆಚ್ಚು ದೈವಾಸಕ್ತಿ ಮೂಡುವಂತೆ ಮಾಡಿದ್ದಾರೆ. ಈಗ "ಕೈವಲ್ಯ ಚಿಂತಾಮಣಿ" ಎಂಬ ಕಿರು ಹೊತ್ತಿಗೆಯನ್ನು ರಚಿಸಿ ಜನಸಾಮಾನ್ಯರ ಮುಂದಿಡಲು ಮತ್ತು ಸಾಧಕರಿಗೆ ಅನುಕೂಲವಾಗುವಂತೆ ವಿಚಾರವನ್ನು ತಿಳಿಸಲು ಪ್ರೇರಣೆ ಮಾಡಿದ ಯಶಸ್ಸು ಶ್ರೀ ಶ್ರೀ ಶ್ರೀ ನಿತ್ಯಾನಂದಾವಧೂತರ ಚರಣ ಕಮಲಕ್ಕೂ ಮತ್ತು ಶ್ರೀ ಶ್ರೀ ಕರೀಂಪೀರ್‌ಚಂದ್ರರ ಚರಣ ಕಮಲಕ್ಕೂ ಮತ್ತು ನನ್ನ ಹಿರಿಯ ಕಿರಿಯ ಸೋದರ ಹಿತೈಷಿ ವರ್ಗದವರಿಗೂ ನಾನು ಚಿರಋಣಿ.

ಈ ತತ್ವಗಳನ್ನು ಸಾಧಕರಾದವರು ದಿನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಹೇಗೆ ನಡೆದು ಕೊಳ್ಳಬೇಕು. ಯಾವ ರೀತಿ ಸಾಧಿಸಬೇಕು ಎಂಬುದನ್ನು ಗಮನದಲ್ಲಿಟ್ಟುಕೊಂಡು ಸಾಧಿಸುತ್ತಾ ಬರಬೇಕು. ಸಾಧಕ ವಿದ್ಯಾರ್ಥಿಗಳು ಯಾವ ಪಂಥದವರೇ ಆಗಲಿ ಯಾವ ಗುರುಗಳ ಶಿಷ್ಯರೇ ಆಗಲಿ ದಯವಿಟ್ಟು ನಿತ್ಯ ಜೀವನದಲ್ಲಿ ಗಮನವಿಟ್ಟುಕೊಂಡು ತತ್ವಪದಗಳ ಸಾರವನ್ನು ಅಳವಡಿಸಿ ಕೊಂಡು ಸಾಧಿಸುತ್ತಾ ಬರಬೇಕು. ತತ್ವಪದಗಳ ನಿರೂಪಣೆಯಂತೆ ಯಾರೇ ಸಾಧಿಸಿದರೂ ಸಿದ್ಧ ಪುರುಷರಾಗುವುದರಲ್ಲಿ ಸಂಶಯವೇ ಇಲ್ಲಾ.

ರಾಜಯೋಗ ಸಾರವೆಂದರೆ, ಸ್ಪರ್ಶಮಣಿಯಂತೆ ಯಾವ ಲೋಹವನ್ನೇ ಸ್ಪರ್ಶಮಣಿ ಮುಟ್ಟಿದರೂ ತನ್ನಂತೆ ಮಾಡಿಕೊಳ್ಳುವುದು. ಅದರಂತೆ ಯೋಗಾಭ್ಯಾಸ ಸಾಧಕರಾದವರು ರಾಜಯೋಗ ಸಾರದಲ್ಲಿರುವ ಸಾರವನ್ನರಿತರೆ ಹಿಂದಿನಿಂದಲೂ ತಪಸ್ವಿಗಳು, ಸಿದ್ಧಪುರುಷರು ಯಾವ ರೀತಿ ಆಗಿರುವರೋ ಅದೇ ರೀತಿಯಾಗಿ ಆಗುವರು. ಸೂಕ್ಷ್ಮಗ್ರಾಹಕ ಶಕ್ತಿಯು ಸಾಧಕನಿಗೆ ಬರಬೇಕು. ಉಪಯುಕ್ತವಾದ ವಿಷಯಗಳನ್ನು ಆರಿಸಿಕೊಂಡು

ಭಕ್ತ ಕೋಟಿಗಳು ವೃಥಾ ಕಷ್ಟಪಡದೆ ತಪಸ್ವೀ ಗುರುವನ್ನು ಆಶ್ರಯಿಸಿ ಶಕ್ತಿಪಾತ ದೀಕ್ಷೆಯನ್ನು ಪಡೆದು ರಾಜಯೋಗ ಸಾರದಲ್ಲಿ ಹೇಳಿದ ಅನುಭವಗಳಾಗುವವರೆಗೂ ಸಾಧಿಸಿ ಧನ್ಯರಾಗಬೇಕೆಂಬುದೇ ನಮ್ಮ ಬಯಕೆ.

ಅನೇಕ ಸಂತರು ತಮ್ಮ ವಿದ್ಯೆ ಹಾಳಾಗದಿರಲೆಂದೆ ಗುರು ಸೂತ್ರವನ್ನು ಧರ್ಮ ಕ್ಕೋಸ್ಕರವೇ ಪ್ರಜಾಕೋಟಿ ಉದ್ಧಾರ ಕ್ಕೋಸ್ಕರವೇ ವಿಚಾರ, ತತ್ವ, ಶತಕ, ಷಟ್ಪದಿ, ಶ್ಲೋಕ, ಕಂದ, ಸೀಸ, ಪದ್ಯಗಳ ಮೂಲಕ ಅವರವರ ಗುರುಗಳು ತಿಳಿಸಿರುವ ಪ್ರಕಾರ ಅವರ ಅನುಭವ ಪ್ರಕಾರ ಭಾವನಾರೂಪವಾಗಿ ಜಗತ್ತಿಗೆ ಸಾರಿರುತ್ತಾರೆ. ಅನ್ಯಥಾ ಭಾವಿಸದೆ ಜ್ಞಾನ ದೃಷ್ಟಿಯಿಂದ ವಿದ್ಯಾಸಕ್ತರು ಅವರವರ ಸಾಮರ್ಥ್ಯಕ್ಕನುಸಾರವಾಗಿ ಆರಿಸಿ ಕೊಳ್ಳ ಬಹುದು

ಈ ಕಿರು ಹೊತ್ತಿಗೆಯಲ್ಲಿ ಕಂಡು ಬರುವ ಲೋಪ ದೋಷಗಳನ್ನು "ಗಜಕಪಿತ್ಥ ನ್ಯಾಯದಂತೆ" ಅಂದರೆ ಆನೆಯು ಬೆಲ್ಲದ ಹಣ್ಣನ್ನು ಒಡೆಯದೆ ಹಾಗೆಯೆ ದುಂಡಾಗಿ ನುಂಗಿ ಲದ್ದಿಯಲ್ಲಿ ದುಂಡಾಗಿಯೇ ಹೊರಗೆ ಹಾಕುವುದು ಅದನ್ನು ಒಡೆದು ನೋಡಿದರೆ ಒಳಗಡೆ ಬೀಜವಾಗಲಿ, ತಿರುಳಾಗಲಿ, ನಾರಾಗಲೀ ಯಾವುದೂ ಉಳಿಯದಂತೆ ಭಸ್ಮೀಕೃತವಾಗಿರುವುದು, ಅದರಂತೆ ಉತ್ತಮವಾದ ರಹಸ್ಯವನ್ನು ತೆಗೆದುಕೊಂಡು ನನ್ನನ್ನು ಆಶೀರ್ವದಿಸಬೇಕೆಂದು ಗುರುಗಳ ಪಾದಾರವಿಂದದಲ್ಲಿ ಬೇಡುತ್ತೇನೆ.

ಸ್ಥಳ : ಹಿರಿಯೂರು
ದಿನಾಂಕ : 10-6-1995

ಇಂತಿ ಗುರುಚರಣಕಿಂಕರ
**ಗೋವಿಂದಪ್ಪ**

ಶ್ರೀ ಗೋವಿಂದಪ್ಪ
ಶ್ರೀ ಶಿವಾನಂದ ಪ್ರಕಾಶನ
ಟಿ. ಬಿ. ಸರ್ಕಲ್,
ಹಿರಿಯೂರು -572143

# ವಿಘ್ನ ವಿನಾಯಕ ಬಾರಯ್ಯ

**ರಾಗ - ಮಾಯಾಮಾಳವ ಗೌಳ                ತಾಳ- ತ್ರಿಶ್ರನಡೆ ಆದಿ**

ವಿಘ್ನ ವಿನಾಯಕ ಬಾರಯ್ಯ
ಸದ್ಗುರು ದೇವನು ನೀನಯ್ಯಾ || ಪಲ್ಲವಿ ||

ನಿರ್ವಿಘ್ನದಾರಿಯ ತೋರಯ್ಯಾ
ವಿಘ್ನವಿನಾಯಕ ಬಾರಯ್ಯಾ || ಅನುಪ ||

ಸಾಧನೆ ನಾಲ್ಕು ಗುರುಮುಖದಲಿ ತಿಳಿದು
ಸಾಧಿಸುತಲಿ ನಿತ್ಯ ಬಂದಾತನಿಗೇ
ಆದಿ ಕುಂಡಲಿ ಹಿಡಿದೂ ಧ್ಯಾನಿಪ ಭಕ್ತರಿಗೆ
ಮೇದಿನಿಯೊಳು ಬಂದು ಹರಸಯ್ಯಾ || ವಿಘ್ನ ||

ಮೂಲಾಧಾರದಿ ನೆಲಸಿಹೆ ನೀನು
ಮೂಲೋಕದಿ ನಿತ್ಯ ಪೂಜಿಪನೇ
ಮೂಲಾ ಮಾರ್ಗದಿ ಧ್ಯಾನಿಸುವವರಿಗೆ
ನೀಲಾ ತೋಯದಿ ಬಾರಯ್ಯ ದೇವಾ || ವಿಘ್ನ ||

ನಿತ್ಯದಿ ಮೈಸೂರು ಪುರದಲ್ಲಿರುವಾ
ಸತ್ಯದಿ ಕರೀಂಪೀರ ಚಂದ್ರನ ಸೇವೆಯ
ಉತ್ತಮ ಹಿರಿಯೂರು ನಗರದಿ ವಾಸಿಪ
ಸತ್ಯದಿ ಧ್ಯಾನಿಪ ಗೋಪಿಂದಗೊಲಿದವ || ವಿಘ್ನ ||

# ಬಾತಾಯಿ ಬಾರಮ್ಮಾ ಶಾರದಾದೇವಿ

ರಾಗ - ಮೋಹನ                ತಾಳ - ಝಂಪೆ

ಬಾತಾಯಿ ಬಾರಮ್ಮ ಶಾರದಾದೇವೀ
ಬಾತಾಯಿ ನಮ್ಮಮ್ಮ ಬಾರಮ್ಮಾ                || ಪ ||

ನಿತ್ಯವೂ ಬಿಡದೆ ನೆನೆದೂ ನೆನೆದೂ
ಸತ್ಯವಾಗಿ ಧ್ಯಾನಿಸುವ ಭಕ್ತರೀಗೆ                || ಅನುಪ ||

ಕುಂಡಲೀಯ ರೂಪ ಧರಿಸೀ
ಮಂಡಲಾದೊಳು ಬೆಳಗೂತಿಹಳೇ
ಖಂಡಿತಾ ನಿನ್ನ ಧ್ಯಾನ ಯೋಗಿ
ಪಿಂಡದೊಳಗೆ ನೆಲಸಿದವಳೇ                || ಬಾತಾಯಿ ||

ಶಕ್ತಿಗುರುವಿನ ದೀಕ್ಷೆ ಪಡೆದೂ
ಕ್ಲುಪ್ತವಾಗಿಯೆ ಧ್ಯಾನ ಗೈಯುತಾ
ಸತ್ಯ ನಿಷ್ಠೆಯಿಂದಾ ನಡೆಯಲು
ನಿತ್ಯ ತೇಜದಿ ಗೋಚರಿಸುವಳೇ                || ಬಾತಾಯಿ ||

ಚಿತ್ತದಿಂದ ಭಕ್ತರ ಹರಸಿ
ಉತ್ತಮ ಯೋಗಿ ರೂಪಳಾಗಿಯೇ
ಸತ್ಯ ಶ್ರೀ ಕರೀಂಪೀರ ರೂಪದಿ
ನಿತ್ಯ ಗೋಪಿಂದಾನ ಹರೆಸಲೂ                || ಬಾತಾಯಿ ||

# ಅಂಬಾ ನೀದಯ ಮಾಡಮ್ಮಾ

ರಾಗ - ಆನಂದ ಭೈರವಿ ತಾಳ - ಆದಿತಾಳ

ಅಂಬಾ ನೀದಯ ಮಾಡಮ್ಮ ಶಾಂಭವಿದೇವಿ
ಅಂಬಾ ನೀದಯ ಮಾಡಮ್ಮಾ ॥ ಪಲ್ಲವಿ ॥

ಅಂಬಾ ನೀದಯ ಮಾಡೇ ನಂಬಿದಾಭಕ್ತರಾ
ಬೆಂಬಿಡದೆ ಕಾಯುತಾ ಹರಸಮ್ಮಾ ॥ ಅನುಪ ॥

ಶಿವನಾ ಮುಡಿಯೊಳಗೆ ನೀ ಗಂಗೆಯ ರೂಪದಲ್ಲೀ
ಶಿವನರ್ಧಾಂಗೀ ಎನಿಸಿ ಪಾರ್ವತಿ ರೂಪದಿ
ಶಿವನ ಭಕ್ತರ ನೀನು ಬೆಂಬಿಡದೆ ಕಾಯುತಾ
ಜೀವನ ನೆಲೆ ತಿಳಿಸಿ ಪಾವನಗೊಳಿಸುವೆ ॥ ಅಂಬಾ ॥

ಯೋಗಿವರ್ಯರ ಮೂಲದ್ವಾರದೊಳಗೆ ನಿಂತೇ
ರಾಗದ್ವೇಶವೆಲ್ಲಾ ನೀಗಿ ನಿರ್ಭಯ ಮಾಡಿ
ಆಗಮ ರೂಪದಿ ಜಗದೊಳಗೆ ಮೆರೆಯುತಾ
ಜಾಗರದೊಳು ಪಿಡಿದ ಭಕ್ತಾನ ಯೋಗಿಯ ಮಾಡಿದೆ ॥ ಅಂಬಾ ॥

ವೇದ ಮಾತೇ ಎನಿಸಿ ಜಗದೊಳು ಮೆರೆದಾವಳೇ
ನಾದದಿ ನಿನ್ನಯ ಮಹಿಮೆಯು ತಿಳಿವುದು
ಆದಿಶಕ್ತಿ ಎನಿಸಿ ಭಕ್ತಾರ ಸಲಹುವೆ ನಿತ್ಯಾವು
ಭೋಧದಿ ನಿನ್ನನೂ ಸಾಧಿಸಿ ನೋಡಲುಬಹುದೂ ॥ ಅಂಬಾ ॥

ಧರೆಯೊಳು ಮೈಸೂರು ಪುರದೊಳು ಚಾಮುಂಡೀ
ಹಿರಿಯ ಕರೀಂ ಪೀರಾನು ನಿನ್ನನು ಭಜಿಸಾಲೂ
ಕಿರಿಯ ಗೋವಿಂದಾನ ಕರುಣಿಸಿ ನೀ ಬಂದೂ
ಧರೆಯೊಳು ಕೀರ್ತಿಯ ಪಡೆವಂತೆ ಮಾಡಿದೇ ॥ ಅಂಬಾ ॥

# ಜಯ ಜಯ ನಿತ್ಯಾನಂದಾ

ರಾಗ - ಮಧ್ಯಮಾವತಿ                ತಾಳ - ಆದಿತಾಳ

ಜಯ ಜಯ ನಿತ್ಯಾನಂದಾ ಶ್ರೀಗುರುದೇವಾ
ಜಯ ಜಯ ನಿತ್ಯಾನಂದಾ || ಪಲ್ಲವಿ ||

ಕಾಯಕದೊಳು ನಿನ್ನ ಮಹಿಮೆಯ ಪಾಡಲೂ
ನ್ಯಾಯದ ಮಾರ್ಗವ ತೋರಿದೆ ಗುರುವೇ || ಅನುಪ ||

ಖಂಡಿತ ನಿನ್ನಂಥ ಗುರುಗಳು ದುರ್ಲಭ
ಪಿಂಡದಿ ಜೀವನ ನೆಲೆಯನು ತಿಳಿಸಿದೇ
ಕುಂಡಲಿ ಬೆಳಕಲಿ ಶಿಷ್ಯರ ನಿಲಿಸಿದೇ
ಪಂಡಿತನೆನಿಸುತ ಜಗದೊಳು ಮೆರೆದೇ || ಜಯ ||

ಕುಂಡಲಿ ಪ್ರಿಯಸುತ ಶ್ರೀ ಗುರುದೇವಾ
ಮಂಡಲದೊಳು ನೀನು ಶಿಷ್ಯರ ಸಲಹಿದೆ
ಖಂಡಿತ ಸೇವೆಗೆ ಕುಂಡಲಿ ಕೃಪೆ ಮಾಡಿ
ತಂಡ ತಂಡದ ಬೆಳಕಲಿ ಬೆರೆಸಿದೆ || ಜಯ ||

ನಿತ್ಯವು ನಿನ್ನಯ ಮಹಿಮೆಯ ಪಾಡಲೂ
ಸತ್ಯಾಮಾರ್ಗದಿ ಭಕ್ತರ ಸಲಹುವೇ
ಉತ್ತಮ ನಿತ್ಯಾನಂದ ಗುರುದೇವಾ
ಚಿತ್ತದಿ ಕರೀಂಪೀರ ಗೋವಿಂದಗೊಲಿದೆ || ಜಯ ||

# ಶರಣು ಮಹಾದೇವ ಶಂಕರ

ರಾಗ - ತಿಲಂಗ್ ತಾಳ - ತ್ರಿಶ್ರನಡೆ ಆದಿ

ಶರಣು ಮಹಾದೇವ ಶಂಕರಾ
ಕರುಣಿಸಿ ಬಾರಯ್ಯ ಶಶಿಶೇಖರಾ ॥ ಪ ॥

ರಜತಾದ್ರಿ ವಾಸವು ರಾಗರಂಜಿತನೇ
ಅಜಹರಿ ರೂಪಾ ಶರಣಾರ ಪ್ರಿಯನೇ ॥ ಅನುಪ ॥

ಗೌರಿಯನಾಥಾ ಕಾಲಭೈರವನೇ
ಕಾರಣ ಪುರುಷಾ ತ್ರಿಶೂಲಧಾರಿಯೇ ॥ ಶರಣು ॥

ಭಕ್ತವತ್ಸಲ ದೇವ ಭವಪಾಶ ಹರಿಸಯ್ಯಾ
ಶಕ್ತೀಯಾ ಪ್ರೀಯಾ ಮುಕ್ತೀಯ ನಾಥಾನೇ ॥ ಶರಣು ॥

ಲೀಲೆಯಿಂದಲಿ ತಾನು ಹಾಲಾಹಲವ ಕುಡಿದ
ಫಾಲಾಕ್ಷರೂಪನೆ ಕರುಣಿಸಿ ಬಾರಯ್ಯಾ ॥ ಶರಣು ॥

ಭಸ್ಮಾವಧರಿಸೀದ ಭಕ್ತಾರ ಕಾಯುವ
ಭಸ್ಮಾಂಗ ಧಾರಿ ಕೌಸ್ತುಭ ಹಾರಿಯೇ ॥ ಶರಣು ॥

ಶರಣೆಂದು ಬೇಡುವೇ ಪಾರ್ವತಿ ವಲ್ಲಭ
ಕರುಣೀಸಿ ಗೋವಿಂದಗೊಲಿಯೂತ ಬಾರಯ್ಯಾ ॥ ಶರಣು ॥

# ಚಂದ್ರಯ್ಯ ಮಾತನಾಡೋ

ರಾಗ - ನಾದನಾಮ ಕ್ರಿಯೆ ತಾಳ - ತ್ರಿಶ್ರನಡೆಆದಿ

ಚಂದ್ರಯ್ಯ ಮಾತನಾಡೋ ಕರೀಂಪೀರ್ ಚಂದ್ರಯ್ಯ ಮಾತನಾಡೋ
ಚಂದ್ರಾನ ರೂಪವೆ ಯೋಗಿಯ ದೀಪವು ಚಂದ್ರಯ್ಯ ಮಾತನಾಡೋ

ನಿತ್ಯಾ ನಿನ್ನಯ ನಾಮವಾ ಸತ್ಯಾದಿ ಭಜಿಸುವೆನೂ
ಪ್ರತ್ಯಗಾತ್ಮಾ ಗುರುವೇ ಚಿತ್ತದೊಳ್ ಮಾತನಾಡೋ ||ಚಂದ್ರ||

ಆಗಾಮದೊಡಯಾನೇ ಯೋಗಿ ಪುಂಗವ ನೀನೂ
ನೀಗಿ ದುಃಖವನೆಲ್ಲಾ ಬೇಗಾನೆ ಮಾತನಾಡೋ ||ಚಂದ್ರ||

ಶ್ವಾಸಾವ ನಿಲಿಸುವ ದೇಶಿಕೋತ್ತಮ ಗುರುವೇ
ಪಾಶಾವ ಹರಿಸುವಾ ಈಶಾನೆ ಮಾತನಾಡೋ ||ಚಂದ್ರ||

ಬಣ್ಣಾ ಬಣ್ಣಾದ ಬೆಳಕೂ ಸಣ್ಣಾನ ಕಿಂಡಿಯೊಳೂ
ಹುಣ್ಣಿಮೆರೂಪದ ಅಣ್ಣಾನೆ ಮಾತನಾಡೋ ||ಚಂದ್ರ||

ಜ್ಯೋತೀಯ ರೂಪಾವಾ ಪ್ರೀತಿಯಿಂದಲಿ ನೋಡೀ
ಖ್ಯಾತೀಯ ಪಡೆವಂತ ನೀತೀಯ ಮಾತನಾಡೋ ||ಚಂದ್ರ||

ವಂದೀಸಿ ಗುರುಪಾದಕ್ಕೇ ಚಂದಾದಿ ಪೇಳುವೆನೂ
ಇಂದೂಧರಾ ಭಕ್ತಾ ಗೋವಿಂದನಾ ಜತೆ ಮಾತನಾಡೋ ||ಚಂದ್ರ||

# ದಯಮಾಡೋ ರಂಗಾ

ರಾಗ - ಹಿಂದೂಳ　　　　　　　　ತಾಳ - ಆದಿತಾಳ

ದಯಮಾಡೋ ರಂಗ ದಯಮಾಡೋ
ದಯಮಾಡೋ ನಿಮ್ಮ ದಾಸನು ನಾನೆಂದೂ　　॥ ಪ ॥

ಉದಯ ಕಾಲದೊಳು ಮರೆಯದೆ ಭಜಿಸುವೇ
ಪದುಮನಾಭ ಬಂದು ಮುದದಿ ರಕ್ಷಿಸಯ್ಯಾ　　॥ ದಯ ॥

ನಿನ್ನಯ ನಾಮುವ ಬಿಡದೆ ಹಾಡುವೆನಯ್ಯಾ
ಪನ್ನಾಗ ಭೂಷಣ ಚನ್ನಾಕೇಶವ ಹರಿಯೇ　　॥ ದಯ ॥

ಸತ್ಯದಿ ಬೇಡುವೇ ಚಿತ್ತದಿ ನಿಲ್ಲಯ್ಯಾ
ಉತ್ತಮ ಯತಿಗಳ ಸಂಗದೊಳ್ ಬೆರೆಸಯ್ಯಾ　　॥ ದಯ ॥

ವೇದವನೋದಲೂ ಸಿಗದಂತಿರುವೇ
ಭೋದದಿ ಹುಡುಕಲು ಕಾಣದೆ ನೀನಿರುವೇ　　॥ ದಯ ॥

ಜಾತಿಭೇಧವನೆಣಿಸದೆ ಜಗದೊಳು
ನೀತಿ ಮಾರ್ಗದಿ ಪ್ರೀತಿಲಿ ಭಜಿಸುವೇ　　॥ ದಯ ॥

ಕಾಯಕದಲಿ ನಿತ್ಯ ನ್ಯಾಯದಿ ದುಡಿಯುವೆ
ರಾಯನೆ ಬಾರಯ್ಯ ಕರುಣಿಸಿ ಸಲಹಯ್ಯಾ　　॥ ದಯ ॥

ಭಕ್ತಿಯಿಂದ ನಿತ್ಯ ನಿನ್ನ ಬೇಡುವೆನಯ್ಯಾ
ಶಕ್ತಿಯ ಕೃಪೆಯನು ನೀಡಿ ಸಲಹಯ್ಯಾ　　॥ ದಯ ॥

ಪ್ರೀತಿಲಿ ಗುರುಸೇವೆ ಮಾಡುತ ಬರುವೆ
ಸ್ವಾತಿ ಮುತ್ತಿನ ಪರಿ ಮಾಡೆನ್ನ ದೇವಾ　　॥ ದಯ ॥

ಚಂದ್ರಾನ ರೂಪದಿ ಕರೀಂಪೀರ ಗುರುವೆ
ಚಂದದಿ ಸೇವೆಯೋಳ್ ನಿಂದ ಗೋವಿಂದಗೆ　　॥ ದಯ ॥

# ಕೇಳಿರಿ ಕೇಳಿರಿ ಓ ನರರೆ

ರಾಗ - ಹರಿ ಕಾಂಭೋಜಿ ತಾಳ - ಆದಿತಾಳ

ಕೇಳಿರಿ ಕೇಳಿರಿ ಓ ನರರೆ
ಹೇಳುವ ಮಾತನು ಲಾಲಿಸಿರಿ
ಬಾಳಲಿ ದೇವನ ಮರೆಯದಿರಿ ॥ ಪ ॥

ಚಿನ್ಮಯ ದೇಹದ ಮಧ್ಯದೊಳು
ತನ್ಮಯ ಜನ್ಮದ ಕಾರಣವು
ಉನ್ಮನಿ ಯೋಗದಿ ತಿಳಿಯುವುದು ॥ ಕೇಳಿರಿ ॥

ಮೂಳೆ ಮಾಂಸದಿ ಕೂಡಿಹುದು
ಗಾಳಿಯ ತುಂಬುವ ಚೀಲವಿದೂ
ಹೇಳದೆ ಕೇಳದೆ ಹೋಗುವುದು ॥ ಕೇಳಿರಿ ॥

ಈಶನ ತನ್ನೊಳಗರಿಯದಲೆ
ಕಾಶೀ ಯಾತ್ರೆಯ ಮಾಡಿದೊಡೆ
ಈಶನು ಬಂದು ತೋರುವನೆ ॥ ಕೇಳಿರಿ ॥

ಭೋದದ ದಾರಿಯ ಹಿಡಿಯುತಲಿ
ಸಾಧನೆ ಮಾಡುತ ಬಂದವಗೆ
ವೇದದ ಹಾದಿಯು ತೋರುವುದು ॥ ಕೇಳಿರಿ ॥

ಸೋಹಂ ಭಾವವ ಪಿಡಿದವಗೆ
ಮೋಹ ಮಾಯೆಯು ತೊಲಗುತಲಿ
ದೇಹದಿ ನಾದವು ಕೇಳುವುದು ॥ ಕೇಳಿರಿ ॥

ಸಂಗಮ ಸ್ನಾನವ ಮಾಡಿದಗೆ
ರಂಗನ ರೂಪದ ಲಿಂಗವದು
ಮಂಗಳವಾಗಿಯೆ ತೋರುವುದು ॥ ಕೇಳಿರಿ ॥

ಬಣ್ಣದಬಣ್ಣದ ತೇಜವದು
ಸಣ್ಣನ ಕಿಂಡಿಲಿ ಕಾಣಿಸಲು
ತಣ್ಣಗೆ ದೇಹವು ಆಗುವುದು ॥ ಕೇಳಿರಿ ॥

ಚಂದದಿ ಕರೀಂಪೀರ ಚಂದ್ರಾನು
ಗೋವಿಂದಗೇಳಿದ ರೀತಿಯಲಿ
ಚಂದದಿ ಮುಕ್ತಿಯು ದೊರೆಯುವುದು ॥ ಕೇಳಿರಿ ॥

# ನಿನ್ನನು ನಂಬಿದೆ ಗುರುದೇವಾ

ರಾಗ - ಶುದ್ಧದನ್ಯಾಸಿ                    ತಾಳ - ಆದಿತಾಳ

ನಿನ್ನನು ನಂಬಿದೆ ಗುರುದೇವಾ
ಯನ್ನ ಕಾಯುವ ಭಾರವು ನಿನ್ನದಯ್ಯಾ          ॥ ಪ ॥

ಜನನ ಮರಣದೊಳು ನೊಂದಿರುವೆ
ಅನವರತ ಬೇಡುವೆ ಗುರುದೇವಾ          ॥ ಅನುಪ ॥

ಈಶಣದಾಸೆಯ ಬಿಡಿಸಯ್ಯ ಗುರುವೆ
ಪಾಶವ ಹರಿಸಿ ಸಲಹಯ್ಯಾ ಪ್ರಭುವೆ
ಕ್ಲೇಶವ ಹರಿಸಿ ಪರಮನೊಳ್ ಬೆರಸ್ಯಯ್ಯ
ದಾಸನಾಗಿ ಬಂದು ಸೇವೆಯ ಗೈಯುವೆ          ॥ ನಿನ್ನನು ॥

ತಂದೆ ನೀನೆ ತಾಯಿ ನೀನೆ ಗುರುದೇವಾ
ಬಂಧು ಬಳಗವೆಲ್ಲವೂ ನೀನೆಂದು ನಂಬಿರುವೇ
ಬಂಧನ ಹರಿಸಿ ಚಂದದಿ ಸಲಹಯ್ಯಾ
ಇಂದಿರ ರಮಣಪ್ರೀಯ ಶ್ರೀಗುರುದೇವಾ          ॥ ನಿನ್ನನು ॥

ಶಾಂತಿಯು ದೊರೆಯಲೂ ನೀನೆಅಲ್ಲವೆ
ಭ್ರಾಂತಿಯು ಕಳೆಯಲು ಕಾರಣ ನೀನೇ
ಚಿಂತೆಯೆಲ್ಲವ ದೂರ ಗೈವೆ ಪ್ರಭುದೇವಾ
ಸಂತ ವಿಠಲನ ಅಂತರಂಗ ಶ್ರೀಗುರುದೇವಾ          ॥ ನಿನ್ನನು ॥

ಬ್ರಹ್ಮ ಜ್ಞಾನವ ನೀಡಿದೆ ಗುರುದೇವಾ
ಬ್ರಹ್ಮಾನಂದವ ತೋರಿದೆ ಪ್ರಭುವೇ
ಯಮ್ಮಯ ಜೀವನ ಪಾವನ ಗೊಳಿಸಿದೆ
ನಿಮ್ಮಯ ದಾಸ ಕಿರಿಯ ಗೋವಿಂದಾ ॥ ನಿನ್ನನು ॥

# ಹುಣ್ಣಿಮೆಯ ಬೆಳಕಿನ ಚಂದ ಚಂದ್ರಮನ

ರಾಗ - ಸಿಂಧೂ ಭೈರವಿ   ತಾಳ - ತ್ರಿಶ್ರನಡೆ ಆದಿ

ಹುಣ್ಣಿಮೆಯ ಬೆಳಕಿನ ಚಂದ ಚಂದ್ರಮನ
ಕಣ್ಣಿನಿಂದಲಿ ನೋಡಬನ್ನಿರೋ || ಪ ||

ಒಂಟಿಕಂಬಾದ ಮೇಲೆ ನೀಟಾಗಿ ನಿಂತಿಹಾ
ಎಂಟು ದಳದಾ ಮಧ್ಯ ಗುರುಸ್ವಾಮಿಯಾ || ಹುಣ್ಣಿಮೆ ||

ಥಳಥಳವಾಗಿಯೆ ಮಿಂಚಿನ ಪರಿಯೊಳು
ಹೊಳೆವ ಚಂದ್ರಮನ ಇಳೆಯಲಿ ನೋಡೀರೋ || ಹುಣ್ಣಿಮೆ ||

ಭೇರಿಯ ನಾದದ ಮಧ್ಯದಿ ತೋರುವ
ಕಾರಣ ಪುರುಷ ನಿತ್ಯಾನಂದನ ನೋಡಿರೋ || ಹುಣ್ಣಿಮೆ ||

ಹದಿನಾರು ಕಲೆಗಳು ಮುದದಿ ತುಂಬಿರುವಾ
ಚದುರ ಚಂದ್ರಮನ ಚದಲದೆ ನೋಡಿರೋ || ಹುಣ್ಣಿಮೆ ||

ದೃಷ್ಟಿಯ ನಿಲಿಸಲು ಚಂದಾಚಂದದಿ ಹೊಳೆವ
ಇಷ್ಟಲಿಂಗದ ಮಧ್ಯ ಶ್ರೇಷ್ಠನ ನೋಡೀರೊ || ಹುಣ್ಣಿಮೆ ||

ಚಂದ್ರನ ಕಳೆಯುಳ್ಳ ಕರೀಂಬೀರ ಚಂದ್ರನ
ಸುಂದರ ಸೇವಕ ಗೋವಿಂದ ಕಂಡಂತ || ಹುಣ್ಣಿಮೆ ||

# ಬಂತು ಬಂತು ಆಷಾಢ ಹುಣ್ಣಿಮೆ ದಿನವು

ರಾಗ ದುರ್ಗ ತಾಳ - ತ್ರಿಶ್ರನಡೆ ಆದಿ

ಬಂತು ಬಂತು ಆಷಾಢ ಹುಣ್ಣಿಮೆ ದಿನವೂ
ಸಂತೋಷದಿ ಗುರುಗಳನು ಪೂಜಿಪ ದಿನವೂ ॥ ಪ ॥

ಕಂತು ಶಿವನು ಹರಿ ಅಜರು ಮೆಚ್ಚುವ ದಿನವೂ
ಶಾಂತವಾಗಿ ಗುರು ಪುತ್ರರು ನಲಿಯುವ ದಿನವೂ ॥ ಅನುಪ ॥

ಎಲ್ಲ ಪಂಥದಲ್ಲೂ ಗುರುವ ಪೂಜಿಪ ದಿನವೂ
ಎಲ್ಲರಿಗೂ ಗುರುವೆ ಶಿವನಾಗಿ ತೋರುವಾ
ಎಲ್ಲ ರೂಪು ಗುರುವೆ ಎಂದು ತಿಳಿದು ನೋಡುವಾ
ಎಲ್ಲ ಕಾಮ್ಯ ಗುರುವಿನಿಂದ ನಡೆವುದೆನುತಲೀ ॥ ಬಂತು ॥

ಅಷ್ಟಪಾಶವನ್ನು ಗೆಲಿದ ತೇಜ ಮೂರ್ತಿಯು
ಅಷ್ಟಾಂಗಯೋಗವನ್ನು ಗೆಲಿದ ಯೋಗಿಯು
ಕಷ್ಟಸುಖಗಳನ್ನು ಮೆಟ್ಟನಿಂತ ಧೀರನೂ
ಅಷ್ಟದಳದ ಪದ್ಮವನ್ನು ಅರಿತ ಮೂರ್ತಿಯೂ ॥ ಬಂತು ॥

ಯೋಗಿರಾಜ ಗುರುವರನೇ ನಿತ್ಯಾನಂದಾ
ಸಾಗಿ ಬಂದು ಗಣೇಶ ಪುರಿಯಲ್ಲಿ ಸೇರಿದೆ
ರಾಗದ್ವೇಶ ರಹಿತ ಗುರುವೆ ಕರೀಂ ಪೀರಾ
ಬಾಗಿ ಚರಣ ಸೇವೆ ಗೈದ ಗೋವಿಂದಾ ॥ ಬಂತು ॥

# ಯಾಕೆ ಕುಣಿಯುತೀಯ ಹೇಳೋ ಮನುಜ

**ರಾಗ - ಮಾಯಮಾಳವಗೌಳ     ತಾಳ - ತ್ರಿಶ್ರನಡೆ ಆದಿ**

ಯಾಕೆ ಕುಣಿಯುತಿಯು ಹೇಳೋಮನುಜಾ ಶರೀರ ನಂಬಿ ಜಗವ ನಂಬಿ
ಜೋಕಾಗಿ ಹೋಗುತ್ತೈತೆ ಕಣ್ಣುಮುಚ್ಚಿ ಮೇಲೆ ಮಣ್ಣು ಮುಚ್ಚಿ

ಮಾಯಾದೀ ಶರೀರವ ನಂಬಬೇಡಾ 'ಎಲೆ ಜಂಭದಿಂದಾ
ಕಾಯಾವಿರುವಾಗ ಶಿವನ ನೆನೆಯೋ ಮರೆಯಬೇಡಾ

ತಂದೆ-ತಾಯಿ ಬಂಧು ಬಳಗ ಎಂಬುವಾರು ಎಲ್ಲಿವರೆಗೂ
ತಂದಂತ ಹಣವಾ ತಿಂದು ತೇಗಿ ಉಣ್ಣೋವರೆಗೂ
ಬಂದಂತೆ ಹೋಗೂವ ಕಾಲದೋಳು ನಿನ್ನ ಹಿಂದೇ ತಂದೆ ತಾಯಿ
ಬಂಧು ಬಳಗ ಎಂಬುವಾರು ಬರುವಾರೇ ಹೇಳೋ ಮನುಜಾ

ಹೆಂಡ್ತಿ ಮಕ್ಕಳೆಂಬುವರು ಎಲ್ಲಿವರೆಗೂ ಹೇಳೋ ಮನುಜಾ
ಉಂಡು ತಿಂದು ಮಲಗಿ ನಿದ್ದೆ ಮಾಡೋವರೆಗೂ ದುಡಿಯೊವರೆಗೂ
ಕಂಡಂತೆ ಹೋಗೂವ ಕಾಲದೋಳು ಹೆಂಡ್ತಿ ಮಕ್ಕಳೆಂಬುವರೂ
ಪಿಂಡದಿಂದೇ ಬರುವಾರೆ ಯೋಚಿಸಿ ನೋಡಿ ಹೇಳೋ ಮನುಜಾ

ಸೂಳೆ ಎಂಬೂವಾಳು ಎಲ್ಲಿವರೆಗೂ ಬರುವಾಳು ಹೇಳೋ ಮನುಜಾ
ಹಾಳಾದ ದೇಹಾವು ಬೀಳೋವರೆಗೂ ದುಡಿಯೋವರೆಗೂ
ಖೂಳಾ ಯಮಾನು ಬಂದು ಪ್ರಾಣಾವ ಎಳೆಯುವ ಕಾಲದೋಳು
ಗಾಳೀಗೆ ಧೂಳು ಹಾರಿ ಹೋಗುವ ತೆರದಿ ಹೋಗುವಾಳು

ಮನೆ-ಮಠ ಆಸ್ತಿ-ಪಾಸ್ತಿ ಎಲ್ಲಿವರೆಗೂ ಹೇಳೋ ಮನುಜ
ಘನದೇಹಾವು ತಾನು ಬೀಳೋವರೆಗೂ ಹಾಳಾಗೋವರೆಗೂ
ತಾನಾರು ಎಂಬ ಅರಿವನ್ನು ಗುರುವಿಂದ ತಿಳಿದು ನೋಡೋ ಮನುಜಾ
ಮಾನಾಭಿಮಾನವಳಿದೂ ಗೋವಿಂದನಾನುಡಿ ಕೇಳೋ ಮನುಜಾ

## ಸಾಧನೆ ತಿಳಿಸುವ ಗುರುವನು ಪಿಡಿಯದೆ ಕಾಲವ ಕಳೆದೇಕೇ

ರಾಗ - ಶಂಕರಾಭರಣ ತಾಳ - ಆದಿತಾಳ

ಸಾಧನೆ ತಿಳಿಸುವ ಗುರುವನು ಪಿಡಿಯದೆ ಕಾಲವ ಕಳೆದೇಕೇ
ವೇದ ಆಗಮ ಶಾಸ್ತ್ರ ತಿಳಿದು ಭೋಧಾ ಪಡೆಯಾದಿರುವೇಕೇ
|| ಪ ||

ಗುರುವನು ನಿತ್ಯವೂ ತಪ್ಪದೆ ನೋಡದ ಕಣ್ಣುಗಳಿನ್ನೇಕೇ
ಅರಿವಿದ್ದು ಕುರುಡನ ತೆರದೊಳು ಸುಮ್ಮನೆ ನಿಂತೇಕೇ
ಗುರುವಿನ ನಾಮವಾ ನಿತ್ಯವು ನೆನೆಯದಾ ನಾಲಿಗಿನ್ನೇಕೇ
ಪರಿಪರಿ ವಿಧದಿಂದಾ ಪರಮನ ಬೇಡದೆ ಸುಮ್ಮನಿರುವೇಕೇ
|| ಸಾಧನೆ ||

ಚಿತ್ತದಿ ಗುರುವಿನ ನಾಮವ ಭಜಿಸದೆ ಕಾಲವ ಕಳೆದೇಕೇ
ಸತ್ಯದಿ ನಿತ್ಯವು ಶಿವಮಂತ್ರ ಜಪಿಸದಾ ಬರಿ ಮಾತುಗಳೇಕೇ
ಉತ್ತಮ ಯೋಗಾಭ್ಯಾಸದೀ ಮನವ ನಿಲ್ಲಿಸದಿರುವೇಕೇ
ಪ್ರತ್ಯಾಗಾತ್ಮನ ಕಾಣದೆ ನೀನು ಧರೆಯೊಳಿರುವೇಕೇ
|| ಸಾಧನೆ ||

ದಶವಿಧನಾದ ಕೇಳದೆ ಕಿವಿಯೊಳು ಕಣ್ಮುಚಿ ಕುಳಿತೇಕೇ
ಆಸೆಯನ್ನೆಲ್ಲಾ ಗುರುವಿನೊಳಿಟ್ಟು ಧ್ಯಾಸಾ ಬಲಿಸಾದಿರುವೇಕೇ
ಕ್ಲೇಶವ ಹರಿದೂ ಪಾಶವ ಕಳೆವಂತಾ ಈಶನ ಮರೆತೇಕೇ
ದೇಶಿಕೋತ್ತಮಾ ನಿತ್ಯಾನಂದನಾ ಭಜಿಸಾದಿರುವೇಕೇ ||ಸಾಧನೆ||

ಗಗನಾಮಾರ್ಗದಿ ನಡೆವಂತ ವಿದ್ಯೇ ಪಡೆಯದೆ ನಿಂತೇಕೇ
ಬೇಗದಿ ನೀನೂ ರಾಗ ದ್ವೇಶಾ ನೀಗದೆ ಸುಮ್ಮಾನಿರುವೇಕೇ
ಸಾಗರದಂತಾ ವಿದ್ಯೆಯ ಗುರುವಿಂದ ಪಡೆಯದೆ ಮರೆತೇಕೇ
ಆಗಮ ಶಾಸ್ತ್ರದಾ ಅರಿವಿನೊಳಗೇ ಬೆರೆಯದ ಓದುಗಳಿನ್ನೇಕೇ
|| ಸಾಧನೆ ||

ಶಾಂಭವಿ ಮುದ್ರೆಯ ಪಡೆಯದೆ ನೀನು ಕಾಲವಕಳೆದೇಕೇ
ಜಂಭದ ಜನರಾ ಸಂಗದಿ ಬೆರೆತು ತನ್ನನು ತಾನು ಮರೆತೇಕೇ
ಶಂಭೂ ಶಿವನೊಳು ಬೆರೆಯುವಾ ಜಾಲಂಧರವಾ ಮಾಡದಿರುವೇಕೇ
ತುಂಬಿ ಬೆಳಗುವಾ ಜೋತಿರ್ಲಿಂಗವಾ ನೋಡದಾ ಕಣ್ಣುಗಳಿನ್ನೇಕೇ
|| ಸಾಧನೆ ||

ಮರಣವ ಕಳೆವಂತಾ ಶರಣರ ದಾರಿಯ ಹಿಡಿಯದೆ ನಿಂತೇಕೇ
ಕಾರಣ ಪುರುಷಾ ಕರೀಂಪೀರ ಚಂದ್ರನಾ ಸೇವೆ ಮಾಡದಿರುವೇಕೇ
ಧಾರುಣಿಯೊಳು ನಕ್ಷತ್ರಮಳೆ ತನ್ನ ಕುಕ್ಷಿಯೊಳ್ ನೋಡದೇ ನಿಂತೇಕೇ
ಪಾರಮಾತ್ಮಕಾ ಗುರುವಿನ ಸೇವಕಾ ಗೋವಿಂದನಾ ಬೆರೆಯದಿರುವೇಕೇ
|| ಸಾಧನೆ ||

# ದೇವಗುರು ವಾಕ್ಯದಂತೆ ನಡೆಯೋ ಮನುಜನೆ

ರಾಗ - ಮೋಹನ ತಾಳ - ತ್ರಿಶ್ರನಡೆ ಆದಿ

ದೇವಗುರು ವಾಕ್ಯದಂತೆ ನಡೆಯೊ ಮನುಜನೇ
ಸಾವು ನೋವು ಭಯಗಳರಿದು ಮುಕ್ತನಾಗುವೆ ॥ ಪ ॥

ನಿತ್ಯ ಪರಮಾತ್ಮನನ್ನು ಪೂಜಿಸಲು ಜಗದೊಳಗೆ
ಸತ್ಯ ಶಾಂತಿ ಶರೀರದೊಳಗೆ ಸೇರಿ ಹೋಗುವೆ ॥ ದೇವ ॥

ಜಾತಿ-ಭೇಧ ಮಾಡದಂತೆ ನಡೆದು ಬಾಳಲೋ
ನೀತಿ ಹಾದಿ ಹಿಡಿದೂ ಜಗದಿ ಖ್ಯಾತಿ ಪಡೆಯಲೋ ॥ ದೇವ ॥

ದೇಹ ನಿನ್ನದೆಂಬ ಭ್ರಾಂತಿ ತ್ಯಜಿಸಿ ನೋಡೆಲೋ
ಮೋಹ ಮಾಯೆ ಹರಿದು ಹೋಗಿ ದಾಸನಾಗುವೇ ॥ ದೇವ ॥

ಧರ್ಮವನ್ನು ಆಶ್ರಯಿಸಿ ನಡೆಯ ಬೇಕೆಲೋ ಅ
ಧರ್ಮವೆಂದೂ ಮಾಡದಂತೆ ದುಡಿಯ ಬೇಕೆಲೋ ॥ ದೇವ ॥

ಯೆಲ್ಲಧರ್ಮ ಸಾರವನ್ನು ಅರಿತು ನೋಡೆಲೋ
ಯೆಲ್ಲ ಜೀವರೊಳಗೆ ದೇವನನ್ನು ನೋಡೆಲೋ ॥ ದೇವ ॥

ಉಪಾಯದಿಂದ ಗುರುಪಾದ ಹಿಡಿಯ ಬೇಕಲೋ
ತಪವ ಮಾಡಿ ಸಿದ್ಧರಂತೆ ಬಾಳು ಜಗದೊಳು ॥ ದೇವ ॥

ಕ್ಲೇಶವೆಲ್ಲ ಹರಿಸುವಂತೆ ಈಶ ಮಂತ್ರ ಜಪಿಸಲೊ
ಈಶ ರೂಪದೊಳಗೆ ಗುರುವು ಧ್ಯಾಸ ನಿಲಿಪನೂ ॥ ದೇವ ॥

ಧ್ಯಾಸ ಶಿವನೊಳು ನಿಲಿಸಿ ನಿತ್ಯ ಜಪವ ಮಾಡಲೋ
ವಾಸ ಶಿವನು ನಿನ್ನ ಸೇರಿ ಜ್ಞಾನ ಬಲಿಪನೋ ॥ ದೇವ ॥

ನಿತ್ಯ ಗುರುಪಾದ ಪಿಡಿದು ಸಾಧಿಸಿದ ಗೋವಿಂದನ
ಸತ್ಯ ಶಾಂತಿ ವಾಕ್ಯವನ್ನು ಮರೆಯಬೇಡಲೋ ॥ ದೇವ ॥

# ಕೋಲೂ ಕೋಲನ್ನ ಕೋಲೆ.

ರಾಗ - ಮಾಯಮಾಳವಗೌಳ                    ತಾಳ - ಆದಿತಾಳ

ಕೋಲು ಕೋಲನ್ನಕೋಲೆ ಸದ್ಗುರುವಿನ
ಕೀಲು ತಿಳಿದಾ ಮೇಲೆ                    ॥ ಪ ॥

ಕೊಲು ಎಂದರೆ ಕೋಲು ಸಾಮಾನ್ಯರಾಡುವ
ಕೋಲಾಟವಲ್ಲವು ಗುರುಪುತ್ರರಾಡುವ ಕೋಲು          ॥ ಅನುಪ ॥

ಪಂಚ ವರ್ಣದ ಕೋಲು ಚಿಂತೇಹರೀಸುವುದು
ಪಂಚಭೂತಗಳನ್ನು ಹಂಚಿಸಿ ತಿಳಿದವಗೇ
ಸಂಚಿತ ಕರ್ಮವ ಕಳೆಯುತ ಬರುತಲಿ
ಮಿಂಚು ಬಳ್ಳಿಯ ತೆರದೊಳಾಡುವ ಕೋಲು          ॥ ಕೋಲು ॥

ಉತ್ತಾಮ ಶಿಷ್ಯಾರು ಗುರುಮಂತ್ರ ಜಪಿಸೂತ
ಚಿತ್ತಾದಿ ಮನವಾನು ಸತ್ಯಾದಿ ನಿಲಿಸುವ ಕೋಲು
ಸತ್ಯಾದಿ ನಡೆಯುತ ಚಿತ್ತಾದಿ ಗುರುಕೃಪೆ
ರತ್ನಾದ ಬೆಳಕಿನೊಳಾಡುವ ಕೋಲು          ॥ ಕೋಲು ॥

ಉನ್ಮಾನಿ ಯೋಗಾದಿ ತನ್ಮಾಯನಾಗೂತ
ತನ್ಮಾಯ ಜನ್ಮಾವ ಚಿನ್ಮಾಯನಾಗಿ ಮಾಡಿ
ಪನ್ನಾಗ ಭೂಷಣ ಶಿವನಾ ಮಹಿಮೆಯಾ
ಚನ್ನಾಗಿ ಪಾಡುತ ನಲಿನಲಿಯುತಲಿ          ॥ ಕೋಲು ॥

ಸಾರಸವಾದಂತ ಚಿನ್ನಾದ ಬಣ್ಣಾದ ಕೋಲೂ
ಆರೂಢ ನಿತ್ಯಾನಂದಾಡಿದ ಕರೀಂಪೀರನಲ್ಲಿ
ಮೇರು ಪರ್ವತದಂತೆ ಇರುವಾ ವಿದ್ಯೆಯಿಂದ
ಸಾರಸಂಗೀತದಿ ಗೋವಿಂದನಾ ಕುಣಿಸಿದಂತಾ          ॥ ಕೋಲು ॥

# ಕ್ಷಣವು ಕ್ಷಣವು ಮರೆಯದಂತೇ

ರಾಗ-ಕಾಂಭೋಜಿ ತಾಳ-ಮಿಶ್ರಚಾಪುತಾಳ

ಕ್ಷಣವು ಕ್ಷಣವು ಮರೆಯದಂತೇ ಶಿವನ ನೆನೆಯೋ ಮನುಜಾನೆ
ಕ್ಷಣವು ಕಾಲ ಶಿವನಮರೆತರೆ ಘೋರ ನರಕಾತಪ್ಪದೂ
॥ ಪ ॥

ಧ್ಯಾಸವನ್ನು ಗುರುವಿನೊಳಿಟ್ಟು ಈಶನನ್ನು ನೆನೆಯೋ ಮನುಜಾ
ಕ್ಲೇಶವೆಲ್ಲಾ ಹರಿದು ಹೋಗಿ ಈಶನಾಗಿ ಬೆಳಗುವೆ ಮನುಜಾ
॥ ಕ್ಷಣವು ॥

ಶ್ವಾಸ ಶ್ವಾಸಕು ಮರೆಯದಂತೆ ಶಿವಪಂಚಾಕ್ಷರಿ ಜಪಿಸೋಮನುಜಾ
ಶ್ವಾಸ ಒಂದನು ಮರೆತೂಬಿಟ್ಟರೆ ಪಾಶ ತಪ್ಪದು ಮನುಜಾನೆ
॥ ಕ್ಷಣವು ॥

ನಾಗ ಸರ್ಪನ ಹೆಡೆಯಾ ಹಿಡಿಯೇ ನಾಗರತ್ನ ಹೊಳೆವುದು ಮನುಜಾ
ನಾಗ ಸರ್ಪನ ಹೆಡೆಯಾ ಬಿಟ್ಟರೆ ಕಚ್ಚಿಸಾಯಿಸುವುದೂ ಮನುಜಾ
॥ ಕ್ಷಣವು ॥

ಭಕ್ತಿಯಿಂದ ಶಿವನಾ ನೆನೆಯೇ ಶಕ್ತಿಗುರುವು ದೊರೆವನು ಮನುಜಾ
ಯುಕ್ತಿವಚನಗಳಿಂದಾ ನಡೆಯೆ ಶಕ್ತಿ ಬರುವುದು ಮನುಜಾನೆ
॥ ಕ್ಷಣವು ॥

ದೃಷ್ಟಿಮನವು ನಿಲ್ಲಿಸಿ ನೋಡು ಕಷ್ಟಪಟ್ಟು ಮನುಜಾನೆ
ಶ್ರೇಷ್ಠವಾದ ಇಷ್ಟಾಲಿಂಗ ಬಂದು ನಿಲ್ಲುವುದೂ ಮನುಜಾ
॥ ಕ್ಷಣವು ॥

ನಿದ್ರೆಯನ್ನು ಗೆಲಿಯುವಂತಾ ಮುದ್ರೆಯನ್ನು ಹಿಡಿಯೊ ಮನುಜಾ
ಭದ್ರವಾಗಿ ಕುಳಿತು ಬಿಟ್ಟರೆ ಚಿದ್ರೂಪನೆ ತಾನಾಗುವೆ ಮನುಜಾ
॥ ಕ್ಷಣವು ॥

ಲಿಂಗವಾ ಕಾಣಲಾಗಿ ಲಿಂಗ ಶರೀರ ಭಂಗವಾಗುವುದೂ ಮನುಜಾ
ಹಂಗು ತೊರೆದು ನಿಸ್ಸಂಗನಾಗಿ ಮೈಯ್ಯಾ ಮರೆಯುವುದೂ
॥ ಕ್ಷಣವು ॥

ಪ್ರಾಣಲಿಂಗವೆನಿಸಿದ ಗುರುವು ನಿತ್ಯನಂದಾನಾಗಿ ಮನುಜಾ
ಕ್ಷೋಣಿಯೊಳು ಕರೀಂಪೀರ ಶಿಷ್ಯಗೋವಿಂದನಾ ವಚನಕೇಳೋ
॥ ಕ್ಷಣವು ॥

# ಯೋಗಿಯ ಗುಣವು ಬೇರಿಹುದೂ

ರಾಗ-ಖರಹರಪ್ರಿಯ ತಾಳ-ತ್ರಿಶ್ರನಡೆ ಆದಿ

ಯೋಗಿಯ ಗುಣವು ಬೇರಿಹುದೂ ಅಂಥಾ
ಯೋಗಿಯ ತಿಳಿಯಲು ಯಾರಿಂದಲಾಗದು
ರಾಗ ದ್ವೇಶವ ಮರೆತು ನೀಗಿ ದುಃಖವನೆಲ್ಲಾ
ಸಾಗರದಂತೆ ಶಾಂತಿಯಲಿ ನಡೆಯುವನೂ ॥ ಯೋಗಿ ॥

ದಿನವೂ ವ್ಯವಹರ ಮಾಡಿ ನಡೆಯುತಿರುವಾ
ಘನ ಯೋಗಾದಿ ಮನವನು ನಿಲ್ಲಿಸುತಿರುವಾ
ಚಿನುಮಯ ಮೂರುತಿಯಾಗಿ ಕಾಣುವಾ
ಅನುಮಾನವನು ತಾನೆ ಅಳಿಸಿದ ಯತಿಯಾ ॥ ಯೋಗಿ ॥

ದೃಷ್ಠಿಯ ನಿಲ್ಲಿಸಿ ನೋಡುತಾ ಜಗದೊಳು
ಶ್ರೇಷ್ಠವಾದ ಜನರ ಸಂಗಾವ ಮಾಡುತಲೀ
ಕಷ್ಠಪಟ್ಟು ದುಡಿದು ಸತ್ಯನಿಷ್ಠೆಲಿ ನಡೆದು
ಇಷ್ಠಾರ್ಥವನು ಧರ್ಮ ದೃಷ್ಠಿಲಿ ಸಾಧಿಪ ॥ ಯೋಗಿ ॥

ಕಾಮ ಕ್ರೋಧಗಳಾ ಕಳೆಯುತ ಜಗದೊಳು
ನೇಮ ನಿಷ್ಠೆಯಿಂದಾ ಸ್ವಾಮಿಯ ಭಜಿಸುತಾ
ಧರ್ಮದ ಮರ್ಮವನರಿತು ನಡೆಯುತಾ
ಕರ್ಮಗಳೆಲ್ಲವ ಕಳೆದೂ ನಿಂತ ಯತಿಯಾ ॥ ಯೋಗಿ ॥

ಈಶಾನ ರೂಪದೀ ಮೆರೆದಾ ನಿತ್ಯಾನಂದಾ
ಕ್ಲೇಶವ ಹರಿಸುತಾ ಜಗ್ಗದೊಳು ಜನರಿಗೇ
ಪಾಶವ ಹರಿಸಿದಾ ಕರೀಂಪೀರ ಚಂದ್ರಾ
ವಾಸದಿ ಹಿರಿಯೂರು ಗೋವಿಂದನಾ ಗುಣ ॥ ಯೋಗಿ ॥

# ದೇಹಾವೆಂಬುದು ತಾನು ಆರುಚಕ್ರದ ತೇರು

ರಾಗ-ಚಕ್ರವಾಕ                ತಾಳ-ಮಿಶ್ರಚಾಪು

ದೇಹಾವೆಂಬುದು ತಾನು ಆರೂ ಚಕ್ರದತೇರು ಗುರುವಿಂದಲರಿತು
ನೋಡೋ
ಸಾಹಸದಿಂದಲಿ ಸೋಹಂ ಭಾವವ ಪಿಡಿದು ಆರುಮಹಲು ಏರಿ
ನೋಡೋ
॥ ಪ ॥

ಮೊದಲಾನೆ ಚಕ್ರವೆ ಮೂಲಾಧಾರವು ತಾನು ನಾಲ್ಕು ದಳದಿ ಗುದ
ಸ್ಥಾನದೊಳು
ಚದಲಾದೆ ಮನನಿಲಿಸಿ ಆರ್ನೂರು ಜಪವ ಗಣಪತಿ ದೇವನಿಗರ್ಪಿಸಲೂ
ಮುದದೊಳ ಬಂಗಾರ ವರ್ಣದಿ ಗಣಪತಿದೇವನು ತೋರುವನೂ
॥ ೧ ॥

ಎರಡು ಅಂಗುಲ ಮೇಲೆ ಸ್ವಾಧಿಷ್ಠಾನ ಚಕ್ರವಾರುದಳದಿ ಲಿಂಗ
ಸ್ಥಾನದೋಳು
ಪರಿಪರಿ ವಿಧದಿಂದ ಆರುಸಾವಿರ ಜಪವ ಬ್ರಹ್ಮದೇವನಿಗರ್ಪಿಸಲೂ
ಹಿರಿಯನಾದ ಬ್ರಹ್ಮದೇವನು ತಾನು ರಕ್ತವರ್ಣದ ಮಧ್ಯತೋರುವನೂ
॥ ೨ ॥

ಆರು ಅಂಗುಲ ಮೇಲೆ ಮಣಿಪೂರ ಚಕ್ರವು ನಾಭಿಸ್ಥಾನದಿ
ಹತ್ತುದಳದಿ ತೋರುವುದು
ಧೀರ ಗುರು ಪುತ್ರರು ಆರುಸಾವಿರ ಜಪವ ವಿಷ್ಣುದೇವನಿಗರ್ಪಿಸಲೂ
ಯಾರು ಅರಿಯದ ಕೃಷ್ಣವರ್ಣದ ಮಧ್ಯ ವಿಷ್ಣುದೇವನು
ತೋರುವನೂ
॥ ೩ ॥

ಹನ್ನೆರಡು ದಳವಾಗಿ ಅನಾಹತ ಚಕ್ರವು ಹೃದಯಸ್ಥಾನದಿ
ತೋರುವುದೂ
ಉನ್ನತ ಭಕ್ತಿಯಲಿ ಆರುಸಾವಿರ ಜಪವ ರುದ್ರದೇವನಿಗರ್ಪಿಸಲೂ
ಚನ್ನಾಗಿ ಬಿಳಿಯ ಬಣ್ಣದ ಮದ್ಯ ರುದ್ರರೂಪವು
ಎದ್ದುತೋರುವುದೊ
॥ ೪ ॥

ಹದಿನಾರು ದಳದಿಂದ ವಿಶುದ್ಧಿ ಚಕ್ರವು ಕಂಠಸ್ಥಾನದೊಳು
ತೋರುವುದೊ
ವೇದ ಸಮ್ಮತದಿಂದ ಒಂದು ಸಾವಿರ ಜಪವ ನಿತ್ಯಜೀವನಿಗರ್ಪಿಸಿದವಗೆ
ನಾದ ಬಿಂದು ಮಧ್ಯಸ್ಪಟಿಕ ಮಣಿಯೊಳು ಕ್ಷೇತ್ರಜ್ಞರೂಪವು
ತೋರುವುದು
॥ ೫ ॥

ಕೇಳಿರಿ ಆಜ್ಞಾಚಕ್ರವೆರಡು ದಳಗಳಾಗಿ ಭ್ರೂಮಧ್ಯಸ್ಥಾನದೊಳ್
ತೋರುವುದು
ಹಾಳು ವಾದಗಳಳಿದು ಒಂದು ಸಾವಿರ ಜಪವ ಕುಂದದೆ
ಪರಮಾತ್ಮ ಗರ್ಜಿಸಿದವಗೆ
ವೇಳೆ ವೇಳೆಗೆ ತಾನು ಮಾಣಿಕ್ಯವರ್ಣದಿ ಲೋಲವಾಗಿ
ಪರಮಾತ್ಮ ತೋರುವನ
॥ ೬ ॥

ಸಾವಿರ ದಳದಿಂದ ಸಹಸ್ರಾರವೆಂಬುದು ನೆತ್ತಿಯ ಮೇಲೆ
ತೋರುವುದೊ
ಹಾವಿನ ಹೆಡೆಹಿಡಿದು ಒಂದು ಸಾವಿರ ಜಪವ ಗುರುಸ್ವಾಮಿ
ಗರ್ಜಿಸಲೂ
ನೋವು ಗಳಳಿದು ಓಂಕಾರ ಶಬ್ದದ ಸೂರ್ಯ ಪ್ರಕಾಶದೊಳೇಕ
ವಾಗುವನೂ
॥ ೭ ॥

ದೇವ ದೇವನಾದ ನಿತ್ಯಾನಂದ ಗುರು ವಾಸವಾಗಿಹನಲ್ಲೀ
ಸಾವಧಾನದಿಂದ ಕರೀಂಪೀರ ಚಂದ್ರನ ತನ್ನೊಳು ಸೇರಿಸಿಕೊಂಡಿಹನೂ
ದೇವ ಗುರುವಿನ ಶಿಷ್ಯ ಗೋವಿಂದಾನನುಡಿ ಲಾಲಿಸಿ ಜಗದೊಳಗೆ.

# ಹಾವನ್ನು ತುಳಿಯ ಬೇಕೊ ಮನುಜ

ರಾಗ-ಹರಿಕಾಂಭೋಜ ತಾಳ - ಆದಿತಾಳ

ಹಾವನ್ನು ತುಳಿಯ ಬೇಕೂ ಮನುಜಾ
ಜೀವ ಭಾವಾವ ಕಳೆಯ ಬೇಕೂ ॥ ಪ ॥

ಹಾವು ಎಂದರೆ ಹಾವು ಗೊಡ್ಡಹಾವಲ್ಲಾವು
ಜೀವಾ ಎಂಬುವ ಮಿಡಿನಾಗರ ಹಾವಿದು ॥ ಅನುಪ ॥

ಹರಿಯಾ ಹೊತ್ತಿರುವಂತಾ ಈ ಹಾವು
ಧರೆಯೊಳು ಗುರುಮಂತ್ರ ಮಹಿಮೆಯಿಂದಾ
ಧೀರನಾದ ಯೋಗಿ ಹಾವೀನ ಹೆಡೆ ತುಳಿಯೇ
ಘೋರ ವಿಷದ ಜ್ವಾಲೆ ಮೈಯ್ಯಾಮರೆಸುವುದು ॥ ಹಾವನ್ನು ॥

ಕಂಪಾನದಿಂದಾಲೀ ಈ ಶರೀರ ತಾನು
ತಂಪಾಗಿ ನಿಲ್ಲುತಾ ಬರುವುದೂ ಮನುಜಾ
ಚಂಪಾಕ ಮಣಿಯದು ಮುಂದೆ ನಿಂತು
ಇಂಪಾದ ನಾದದಿ ಮೈಯಾ ಮರೆಸುವುದೂ ॥ ಹಾವನ್ನು ॥

ನಿತ್ಯಾವು ಗುರು ನಿತ್ಯಾನಂದಾರೆದುರಿನೊಳು
ಅತ್ಯಾನಂದಾದಿ ನಿಂತು ನಲಿಯುವ ಹಾವೂ
ಸತ್ಯದಿ ಕರೀಂಪೀರ ಗೊಲಿಯುತ ಜಗದೊಳು
ಚಿತ್ತಾದಿ ಗೋವಿಂದಗಿತ್ತು ಸಲುಹಿದಾ ಹಾವು ॥ ಹಾವನ್ನು ॥

# ತೂಗೀರಿ ಗುರುದೇವನ

ರಾಗ-ಆನಂದ ಭೈರವಿ ತಾಳ-ತ್ರಿಶ್ರನಡೆ ಆದಿ

ತೂಗೀರಿ ಗುರುದೇವನಾ ಭಕ್ತಾರು ಸೇರೀ
ತೂಗೀರಿ ಗುರುಮೂರ್ತಿಯಾ ॥ ಪ ॥

ತೂಗೀರಿ ಗುರುಬ್ರಹ್ಮ ಗುರುವಿಷ್ಣು ಪರಶಿವನಾ
ತೂಗೀರಿ ಪರಬ್ರಹ್ಮ ಸ್ವರೂಪ ಮೂರ್ತಿಯಾ ॥ ಅನುಪ ॥

ಯೋಗಿಗಳೆಲ್ಲಾರು ಬಾಗುತ ಶಿರವಾನೂ
ರಾಗ ದ್ವೇಶಗಳೆಲ್ಲ ನೀಗಿ ನಿರ್ಭಯಲಾಗಿ ॥ ತೂಗಿರಿ ॥

ಮಂತ್ರದ ಮಹಿಮೆಯ ಅರಿತೂಸಾಧಿಪರೆಲ್ಲಾ
ತಂತ್ರಾದಿ ಗುರುಮಂತ್ರ ತಿಳಿದವರೆಲ್ಲರೂ ॥ ತೂಗಿರಿ ॥

ಕೆಂಡಾದ ಬೆಳಕನ್ನು ಕುಂಡಲಿ ಮಧ್ಯಾದಿ
ಕಂಡಂತ ಉತ್ತಾಮ ಪಂಡಿತರೆಲ್ಲರೂ ॥ ತೂಗಿರಿ ॥

ಯೋಗಾವ ಸಾಧಿಸಿ ರಾಜಯೋಗದಿ ನೆಲಸಿ
ಬಾಗೂತ ಶಿರವನು ನಿಂತ ಯತಿವರರು ॥ ತೂಗಿರಿ ॥

ಜ್ಞಾನಾದಿ ಜೀವನ ನೆಲೆಯಾನು ತಿಳಿದವರು
ಧ್ಯಾನಾದಿ ಮೈಮರೆತು ನಿಂತಾ ಮೂರ್ತಿಗಳೆಲ್ಲಾ ॥ ತೂಗಿರಿ ॥

ತಾನ್ಯಾರು ಎಂಬುದಾ ಅರಿತ ಪಂಡಿತರೆಲ್ಲಾ
ಸ್ವಾನುಭವದಿಂದಾಲಿ ನಡೆದ ಯತಿವರರೂ ॥ ತೂಗಿರಿ ॥

ಚಿನ್ಮಾಯ ಮೂರುತಿ ಗುರುವೆ ನಿತ್ಯಾನಂದಾ
ತನ್ಮಾಯ ಶಿಷ್ಯ ಕರೀಂ ಪೀರ ಚಂದ್ರಾನಾ ॥ ತೂಗಿರಿ ॥

ಬಾರಿ ಬಾರಿಗೂ ಗುರುಮಂತ್ರಾವ ಹಾಡುತಾ
ಧೀರಾ ಗೋವಿಂದಾನ ತೆರದೊಳು ತೂಗೀರಿ ॥ ತೂಗಿರಿ ॥

# ನಾದಾವ ಕೇಳಿರಣ್ಣಾ ಸಾಧುಗಳೆಲ್ಲ

ರಾಗ-ಸಿಂಧೂಭೈರವಿ　　　　　　ತಾಳ-ಆದಿತಾಳ

ನಾದಾವ ಕೇಳಿರಣ್ಣಾ ಸಾಧುಗಳೆಲ್ಲಾ
ನಾದಾವ ಕೇಳಿರಣ್ಣಾ　　　　　　॥ ಪ ॥

ನಾದಾವ ಕೇಳುತಾ ಕುಳಿತು ವಿನೋದಾದಿ
ಮೋದಾದಿ ಮೈಯನು ಮರೆಯಲಿ ಬೇಕೂ　　　　॥ ಅನುಪ ॥

ಜುಳು ಜುಳು ಎನ್ನುವ ನಾದವನ್ನು ನಿತ್ಯಾ
ಅಳತೆಯಿಲ್ಲದೆ ಕೇಳುತಿರಲೀ ಬೇಕು
ಬಳಲಿಕೇಯಿಲ್ಲಾದೆ ನಾದಾವ ಲಾಲಿಸಲು
ಬಾಳ ಕತ್ತಲೆ ಹರಿದು ಹುಣ್ಣಿಮೆ ನಲಿವುದು　　　॥ ನಾದ ॥

ಶಂಖಾನಾದವನ್ನು ಕಿಂಕರನಾಗಿ ಕೇಳುತ ಕುಳಿತೂ
ಶಂಖೆಯಿಲ್ಲದೆ ನೋಡೆ ನಕ್ಷತ್ರಮಳೆ ತನ್ನ
ಕುಕ್ಷಿಯೊಳ ಸುರಿವುದು ಲಕ್ಷವಿಟ್ಟು ನೋಡಿ
ಈಕ್ಷಿಸಿ ನಾದವ ಕೇಳಲು ಕರ್ಮವು ಹರಿವುದೂ　　॥ ನಾದಾವ ॥

ಒಂಟಿತನದಿ ಕುಳಿತೂ ಘಂಟಾನಾದದೊಳು
ಅಂಟಿಯು ಅಂಟಾದೆ ಶರಿರಾಕೆ ತಾನು
ಘಂಟಾ ಘೋಷದಿ ಗುರುವಾನು ಭಜಿಸಲು
ಭಂಟನಾದ ಹನುಮಾದರ್ಶನ ವೀಯುವ　　　　॥ ನಾದ ॥

ಭೇರಿಯಾ ನಾದವನ್ನು ಕೇಳುತಾ ಕುಳಿತೂ
ಕಾರಣ ಪುರುಷಾನ ಧೀರತನದಿ ತಿಳಿದೂ
ಬಾರಿಬಾರಿಗೂ ತಾನು ಮಿಂಚಿನ ಮಳೆಯೊಳು
ಸಾರಿ ಚಿತ್ ಸೂರ್ಯನ ನೋಡುತಾ ಕುಳಿತು ॥ ನಾದ ॥

ಮೇಘಾನಾದವನ್ನು ಸಾಗರದೋಪಾದಿ
ಜಾಗರದಿಂದಾಲಿ ರಾಗದ್ವೇಶವ ತೊರೆದೂ
ಆಗಮ ಶಾಸ್ತ್ರಾದಿ ಕರೀಂ ಪೀರ ಭೋದಿಸಿದ
ಅಗಣಿತ ನಾದವ ಗೋವಿಂದನಿಂದರಿತು ॥ ನಾದವ ॥

# ರತ್ನಾವ ನೋಡಿರಣ್ಣಾ

ರಾಗ - ಪುನ್ನಾಗವರಾಳಿ　　　　ತಾಳ-ಆದಿತಾಳ

ರತ್ನಾವ ನೋಡಿರಣ್ಣಾ ಜೀವನು ಎನಿಪಾ
ರತ್ನಾವ ನೋಡಿರಣ್ಣಾ　　　　॥ ಪ ॥

ರತ್ನಾವೆಂಬುದು ತಾನು ಪೃಥ್ವಿಗಿಂತಲೂ ಮೇಲು
ರತ್ನಾವು ಬ್ರಹ್ಮಪುರಿಯಿಂದಾಲೀ ಬಂದಿದೇ　　　　॥ ಅನುಪ ॥

ಕಣ್ಣಿನಾ ದೃಷ್ಟಿನಿಲಿಸೀ ಕರ್ಮಗಳೆಲ್ಲಾ
ಸಣ್ಣಾಗೆ ಮಾಡಿದಾ ಧೀರ ಶಿಷ್ಯನಿಗೇ
ಕಣ್ಣಿನಾ ಮಧ್ಯದಿ ಕಾಣೇಸುವಂತಹಾ
ಸಣ್ಣಾಗೆ ಕಾಣುವಾ ಬಣ್ಣಾದ ರತ್ನಾನಾ　　　　॥ ರತ್ನಾವ ॥

ಕಷ್ಟಾವೆಷ್ಟೇ ಬಂದರೂ ದಿನವೂ ಬಿಡದೇ
ದೃಷ್ಟಿಯಾ ನಿಲ್ಲಿಸೀ ಸಾಧಿಸುವವರಿಗೇ
ಶ್ರೇಷ್ಠವಾದಂತಹಾ ರತ್ನಾವ ಕಾಣಲು
ಅಷ್ಟ ಪಾಶಗಳೆಲ್ಲಾ ಹರಿದು ಹೋಗುವವು　　　　॥ ರತ್ನಾವ ॥

ಕಾಮ ಕ್ರೋಧವನಳಿದು ಶಿವನನು ಭಜಿಸಿ
ನೇಮ ನಿಷ್ಠೆಯಿಂದಾ ಗುರುವಾಕ್ಯ ಪಾಲಿಸಿ
ರಾಮ ತಾರಕಾ ಮಂತ್ರ ಮನದೊಳು ಜಪಿಸುವಗೆ
ರಾಮಾನ ರೂಪಾದಾ ಶ್ಯಾಮಾಲ ವರ್ಣಾದ　　　　॥ ರತ್ನಾವ ॥

ಬಾಜಾರದೊಳಗೆಯು ಸಿಗುವರತ್ನಾವಲ್ಲಾ
ರಾಜಾರ ಅರಮನೆಯೊಳು ನೋಡಿದರಿಲ್ಲಾ
ರಾಜಾಯೋಗಿ ಕರೀಂಪೀರನ ಕೃಪೆಯಿಂದಾ
ಸೋಜಿಗದಿಂದಾಲಿ ಗೋವಿಂದಾಗೆ ದೊರೆತ　　　　॥ ರತ್ನಾವ ॥

# ಲಿಂಗಾವ ನೋಡಿರಣ್ಣಾ

ರಾಗ-ಖರಹರಪ್ರಿಯ                ತಾಳ-ಆದಿತಾಳ

ಲಿಂಗಾವ ನೋಡಿರಣ್ಣಾ ಸಾಧುಗಳೆಲ್ಲಾ
ಲಿಂಗಾವ ನೋಡಿರಣ್ಣಾ || ಪ ||

ಲಿಂಗಾವೆಂಬುದು ತಾನು ಕಂಗೊಳಿಸುವುದಣ್ಣ
ಅಂಗಾದಲಿ ಧರಿಸುವುದಲ್ಲಣ್ಣಾ || ಅನುಪ ||

ಭೋದಾವ ಪಡೆದವರೂ ಈ ಲಿಂಗಾವ
ಸಾಧನೆ ಮಾಡುತ ಬರುವ ಯತಿಗಳೆಲ್ಲಾ
ನಾದ ಬ್ರಹ್ಮವ ಕೇಳಿ ಆನಂದದಿರುವರು
ಮೇದಿನಿಯೊಳು ಬಂದು ಕಾಣುವಾ ಲಿಂಗಾವಾ || ಲಿಂಗಾ ||

ಅಷ್ಟಾಂಗ ಯೋಗಾವ ಸಾದಿಸುವವರೆಲ್ಲಾ
ದೃಷ್ಟಿಯಾ ನಿಲ್ಲಿಸಿ ನೋಡಿದಾಯತಿವರರೂ
ಕಷ್ಟಾಪಟ್ಟು ನಿತ್ಯಾ ಸಾಧಿಸುವವರೆಲ್ಲಾ
ಅಷ್ಟ ಪಾಶವ ಹರಿದ ನಿಷ್ಟೆಯುಳ್ಳವರೆಲ್ಲಾ || ಲಿಂಗಾವ ||

ಆಸನ ಸಿದ್ಧಿಯ ಪಡೆದಂತ ಯತಿಗಳೂ
ವಾಸನ ತ್ರಯಗಳಾ ಕಳೆದು ನಿಂತವರೆಲ್ಲಾ
ಶ್ವಾಸ ಮೂಲನ್ಯಾಸ ಮಾಡಿದ ಯತಿಗಳು
ಭಾಸುರ ಪ್ರಭೆಯೊಳು ಹೊಳೆಯುವ ಲಿಂಗಾವ || ಲಿಂಗಾವ ||

ನವವಿಧ ಭಕ್ತಿಯಲಿ ಸಾಧಿಸುತ ಬಂದವರು
ನವದ್ವಾರಗಳ ಮುಚ್ಚಿದಾ ಯತಿವರರು
ಹಾವಿನ ಹೆಡೆಯಾನು ತುಳಿದು ನಿಂತವರೆಲ್ಲಾ
ಜೀವಾದ ಭಯವಾ ಕಳೆದಂತ ಧೀರರೂ ೦ ॥ ಲಿಂಗಾವ ॥

ಈಶಾನ ಕೃಪೆಯಾನು ಪಡೆದಾ ನಿತ್ಯಾನಂದಾ
ಕ್ಲೇಶವ ಹರಿಸಿದಾ ಕರೀಂ ಪೀರ ಚಂದ್ರಾನು
ಪಾಶವ ಹರಿಸುವಾ ಲಿಂಗಾವ ಜಗದೊಳು
ವಾಸದಿ ಹಿರಿಯೂರು ಗೋವಿಂದಗಿತ್ತಂತ ॥ ಲಿಂಗಾವ ॥

# ಮುಕ್ತಿ ದೊರೆವುದು ದುರ್ಲಭವಣ್ಣಾ

ರಾಗ - ಯದುಕುಲಕಾಂಭೋಜಿ     ತಾಳ - ತ್ರಿಶ್ರನಡೆಆದಿ

ಮುಕ್ತಿ ದೊರೆವುದು ದುರ್ಲಭವಣ್ಣಾ
ಶಕ್ತಿ ಮಾತೆಯ ಕೃಪೆಯಾಗದ ಹೊರತೂ     || ಪ ||

ಮುಕ್ತಿ ಎಂಬುದು ಬರಿ ಹೇಳುವ ಮಾತಲ್ಲಾ
ಶಕ್ತಿ ಗುರುವಿನ ಕೃಪೆ ಸಿಗಬೇಕಲ್ಲಾ     || ಅನುಪ ||

ಪಂಚಾಶಕ್ತಿಯ ವಿಷಯ ತಿಳಿದಿರಬೇಕೂ
ಸಂಚಿತ ಕರ್ಮವ ಕಳೆದಿರಬೇಕು ಅಲ್ಲಿ
ಪಂಚಾಗ್ನಿ ಮಧ್ಯಾದಿ ಪ್ರಾಣಾಯಜ್ಞ ಮಾಡಿ
ವಂಚನೆಯಿಲ್ಲಾದೆ ಗುರುಮಂತ್ರ ಜಪಿಸಾದೆ     || ಮುಕ್ತಿ ||

ಜೀವಾನ ನೆಲೆಯನು ತಿಳಿದಿರಬೇಕೂ ಅಲ್ಲಿ
ಜೀವಾ ಭಾವಾವಳಿದೂ ಶಿವನೊಳು ಬೆರೆಯುತಾ
ಯಾವ ಕಾಲಕೂ ಸೋಹಂ ಭಾವದಿರಬೇಕು
ದೇವ ಗುರುವಿನ ಕೃಪೆ ಪಡೆಯಲಿ ಬೇಕು     || ಮುಕ್ತಿ ||

ಪಿಂಡಾದ ನೆಲೆಯನು ತಿಳಿದಿರಬೇಕು ನಿತ್ಯ
ಖಂಡೀತ ವಾಚ್ಯಾವ ಆಡುತ ಜಗದೊಳು ಅ
ಖಂಡ ಮೂರುತಿ ಗುರುದಯದಿಂದ ನಿತ್ಯಾವು
ಪಂಡಿತರೆಲ್ಲ ಸೋಜೀಗ ಪಡುವಂತೆ ನಡೆಯದೆ     || ಮುಕ್ತಿ ||

ನಿತ್ಯಾದಿ ಜಗದೊಳು ನಡೆಯ ದೆಂತವಗೆ
ಚಿತ್ತಾದಿ ಮನವಾನು ಬೆರಸಾಲೀ ಬೇಕೂ
ಉತ್ತಾಮ ಗುರು ನಿತ್ಯಾನಂದನಾ ತೆರದೊಳು
ಸತ್ಯಾದಿ ಕರೀಂಪೀರ ಗೋವಿಂದಗೇಳಿದ ತೆರದಿ     || ಮುಕ್ತಿ ||

# ಆಗಾದಯ್ಯಾ ಮುಕ್ತಿ

ರಾಗ - ಹುಸೇನಿ ತಾಳ - ತ್ರಿಶ್ರನಡೆಆದಿ

ಆಗಾದಯ್ಯಾ ಮುಕ್ತಿ ಆಗಾದಯ್ಯಾ
ತ್ಯಾಗಾವ ಮಾಡದೆ ಭೋಗಾಕೆ ಬೀಳಾಲೂ || ಪ ||

ಹೊತ್ತೊ ಹೊತ್ತಿಗೆ ಜ್ಯೋತಿಹಿತ್ತಿಸಿ ಉರಿಯಾದೆ
ಕತ್ತಾಲೆಯಂತಿರುವಾ ಕರ್ಮಾವ ಕಳೆಯದೇ || ಆಗಾದ ||

ದೇಹಾದ ಮಧ್ಯಾದಿ ದೇವಾನಕಾಣದೆ
ಸೋಹಂ ಭಾವವ ತಿಳಿದೂ ನಡೆಯದೇ || ಆಗಾದ ||

ಹೊಲಗೇರಿ ಯಂತಿರುವ ಶರೀರವನಂಬೀ
ಕುಲಛಲಾವಳಿದೂ ಶಿವನಾನು ಕಾಣದೇ || ಆಗಾದ ||

ಕಾಲನ ಬಲೆಗೆಯು ಸಿಗದಂತೇ ನಿತ್ಯಾವೂ
ಲೋಲವಾಗಿ ಗುರುಮಂತ್ರಾವ ಭಜಿಸಾದೆ || ಆಗಾದ ||

ಆಸನ ಬಲಿಸಾದೆ ಧ್ಯಾಸಾವ ನಿಲಿಸಾದೆ
ವಾಸಾನ ತ್ರಯಗಾಳ ಕಳೆಯಾದ ಮನುಜಾಗೆ || ಆಗಾದ ||

ದೃಷ್ಟಿಯಾ ಬಲಿಸಾದೆ ಇಷ್ಟಾದಿ ನಡೆಯುತಲೀ
ಶ್ರೇಷ್ಠವಾದ ಗುರು ನಿತ್ಯಾನಂದನ ಭಜಿಸದೇ || ಆಗಾದ ||

ದೇಶಿಕೋತ್ತಮ ಗುರು ಕರೀಂಪೀರಾಚಂದ್ರಾನ
ವಾಸಾಗೋವಿಂದಾನ ಧ್ಯಾಸಾವ ತಿಳಿಯದೇ || ಆಗಾದ ||

# ಶಿವನನು ಸ್ಮರಿಸುವೆ ಮನದಲ್ಲಿ

## ರಾಗ - ಕಾನಡ

ಶಿವನನು ಸ್ಮರಿಸುವೆ ಮನದಲ್ಲೀ
ಶಿವಷಡಾಕ್ಷರಿ ಜಪಿಸುತಲೀ || ಪಲ್ಲವಿ ||

ಜೀವನ ನೆಲೆಯನು ತಿಳಿಯುತಲೀ
ಜೀವ ಭಾವವ ಕಳೆಯುತಲೀ || ಅನುಪ ||

ಅಕ್ಷರ ಭೇಧವಾ ತಿಳಿಯುತಲೀ
ಸಾಕ್ಷಿಯಿಂದಾ ನೋಡುತಲೀ
ರಕ್ಷಕ ಗುರುವನು ನೆನೆಯುತಲೀ
ಸಾಕ್ಷಿ ಭೂತನ ತಿಳಿಯುತಲೀ || ಶಿವನನು ||

ಮಂತ್ರದ ಮಹಿಮೆಯ ತಿಳಿಯುತಲೀ
ತಂತ್ರದ ಗುಪಿತವನರಿಯುತಲೀ
ಅಂತರಂಗದೀ ನಿಂತು ನೋಡಲು
ಶಾಂತವಾಗಿ ಗುರುವಿನೊಳ್ ಬೆರೆಯಲು || ಶಿವನನು ||

ಪ್ರಣವದ ಮಹಿಮೆಯ ನರಿಯುತಲೀ
ಪ್ರಣವ ಪಂಚಾಕ್ಷರೀ ತಿಳಿಯುತಲೀ
ವೀಣಾ ನಾದವ ಕೇಳುತ ಬರಲೂ
ಕಾಣುವ ತೇಜದ ಬೆಳಕಲಿ ಬೆರೆಯಲೂ || ಶಿವನನು ||

ಶಿವ ಮಂತ್ರ ಮಹಿಮದಿ ನಿತ್ಯಾನಂದರು
ಭವ ಪಾಶ ಹರಿಸಿ ಕರೀಂಪೀರ ಚಂದ್ರಗೆ
ಶಿವಮಯ ರೂಪವ ಗೋವಿಂದಗರುಹಿಸಿ
ಶಿವನಲಿ ಬೆರೆಸಿ ನಲಿಸಿದಂತಹ || ಶಿವನನು ||

# ಶರಣು ಶರಣು ರಕ್ಷಿಸಮ್ಮ ಲಕ್ಷ್ಮಿದೇವಿಯೆ

ಶರಣು ಶರಣು ರಕ್ಷಿಸಮ್ಮ ಲಕ್ಷ್ಮಿದೇವಿಯೆ
ಶರಣು ನಿನ್ನ ಚರಣಕೆ ಕರುಣಿಸೆಂದು ಬೇಡುವೆ || ಪ ||

ಯೋಗಿಯಾಗಿ ಭೋಗವೆಲ್ಲ ತ್ಯಾಗಮಾಡಿದೇ
ಸಾಗಿ ಮೌನದಿಂದ ಶಿರವ ತಗ್ಗಿಸಿ ಕುಂತೆಯು || ಶರಣು ||

ಆದವಾನಿಯಲ್ಲಿ ನಿಂತೆ ಲಕ್ಷ್ಮಿದೇವಿನಾಮದಿ
ವೇದ ಶಾಸ್ತ್ರವೆಲ್ಲ ನಿನ್ನ ಒಪ್ಪುವಂತೆ ಮಾಡಿದೆ || ಶರಣು ||

ಜ್ಞಾನದಿಂದ ಕುಳಿತುಕೊಂಡೆ ಯೋಗಿರೂಪಳೇ
ತಾನು ಯಾರು ಎಂಬ ವಿಷಯ ತಿಳಿದು ನಿಂತೆಯೋ || ಶರಣು ||

ಸಾವಧಾನದಿ ಯೋಗಿ ನೀನು ಜಾಲಂಧರ ಹಿಡಿಯುತಾ
ಭಾವವೆಲ್ಲವಳಿದು ದೇವನಂತೆ ತೋರಿದೇ || ಶರಣು ||

ಅಷ್ಟಸಿದ್ಧಿಗಳಾಪಡೆದು ಭಕ್ತರನ್ನು ಸಲಹಿದೆ
ಎಷ್ಟು ಹೇಳಲಿ ನಿನ್ನ ಮಹಿಮೆ ಶ್ರೇಷ್ಠಲಕ್ಷ್ಮಿಯೆ || ಶರಣು ||

ಚಂದ್ರನಂತ ಕಳೆಯುಳ್ಳ ಕರೀಂಪೀರ ಚಂದ್ರನ
ಸುಂದರದಾ ಸೇವಕ ಗೋವಿಂದನಾಮನದಿ ನಿಂತೆ || ಶರಣು ||

# ಮಂಗಳಾರತಿ

ಮಂಗಳಂ ಕರೀಂಪೀರ ಚಂದ್ರಾಯ ಶುಭ
ಮಂಗಳಂ ಗುರುದೇವ ನಿತ್ಯಾನಂದ ರೂಪಾಯ || ಪ ||

ಮಂಗಳಂ ಭವರೋಗ ವೈದ್ಯಾಯ ಶುಭ
ಮಂಗಳಂ ದೇವಾದಿ ದೇವಾಯ || ಅನುಪ ||

ತಾರಕದ ಕಳೆ ತುಂಬಿ ಬೆಳಗುವನೆ ಶ್ರೀ
ಗುರುದೇವ ಸಾರಸಂಗೀತಗಳ ನುಡಿಸುವನೇ
ಭೇರಿ ನಾದದಿ ಮೆರೆಯುತಿಹೆ ನೀನು ಶ್ರೀ
ಗುರುದೇವಾ ಶಿವನರೂಪ ಆಗಿ ತೋರುವೆ || ಮಂಗಳಂ ||

ಕುಂಡಲಿ ಒಲಿದಂತ ಗುರುದೇವ ನಿತ್ಯವು
ಮಂಡಲಾದೊಳು ಬೆಳಗಿ ತೋರಿದೆಯೂ
ಖಂಡಿತಾ ನಿನ್ನ ಸೇವೆಗೈದಾ ಶಿಷ್ಯರಾ
ಪಿಂಡದೊಳು ನೆಲೆಸಿದೆಯು ಗುರುದೇವಾ || ಮಂಗಳಂ ||

ಮಂಡಲಾದೊಳು ಗಣೇಶ ಪುರಿವಾಸ ನಿನ್ನ
ಪಿಂಡದೊಳು ನೆಲಸಿಹನು ಕರೀಂಪೀರಾ
ಖಂಡಿತ ನಿನ್ನ ಸೇವೆಯಿಂದ ಧನ್ಯನಾದ
ಕುಂಡಲೀಸುತ ಪ್ರೀಯ ಗೋವಿಂದಾ || ಮಂಗಳಂ ||

# ಶ್ರೀ ಶ್ರೀ ಶ್ರೀ ನಿತ್ಯಾನಂದ ಕವಚ

## ರಾಗ - ರಾಗಮಾಲಿಕ

ನಿತ್ಯನಂದನೆ, ನಿತ್ಯನಂದನೆ ನಿತ್ಯನಂದನೆ ಪಾಲಿಸೂ
ನಿತ್ಯನಂದನೆ ಯೋಗಿ ರಾಜನೆ ತ್ಯಾಗಭೂಪನೆ ರಕ್ಷಿಸೂ ॥ಪ॥

ಭಕ್ತಿಯಿಂದಲಿ ನಿನ್ನನಾಮವ ನಿತ್ಯಹಾಡಿಸು ದೇವನೇ
ಯುಕ್ತಿಯಿಂದಲಿ ಧ್ಯಾನ ಮಾಡುವ ದಾರಿತೋರಿಸು ಯೋಗಿಯೇ
ಶಕ್ತಿ ವಿದ್ಯದ ಸಾರನೀಡುತ ಮುಕ್ತಿ ಮಂಟಪಸೇರಿಸೂ
ನಿತ್ಯನಂದನ ನಾಮ ಮಂತ್ರದಿ ಮೃತ್ಯುಭೀತಿಯು ದೂರವೂ 1

ದೇವದಾನವರೆಲ್ಲರಿಂದಲಿ ಪೂಜೆಗೊಂಬುವ ಯೋಗಿಯೇ
ಯಾವ ಕಾಲಕು ಒಂದೆ ಭಾವದಿ ಭಕ್ತರೆಲ್ಲರ ನೋಡುವೇ
ಸೇವೆ ಮಾಡುವ ಶಿಷ್ಯರೆಲ್ಲರ ಭಾವದಂತೆ ತೋರುವೇ
ನಿತ್ಯನಂದನ ನಾಮ ಮಂತ್ರದಿ ಮೃತ್ಯು ಭೀತಿಯು ದೂರವೂ 2

ಗಂಡುವಿದ್ಯದ ಯೋಗ ಶಕ್ತಿಯ ಮಂಡೆ ಮಧ್ಯದಿ ನಿಲ್ಲಿಸೂ
ಅಂಡ ರೂಪದ ಕುಂಡಲೀಯೊಳು ಕೆಂಡದಂತ ತೇಜವಾ
ಪಿಂಡಮಧ್ಯದಿ ಕಂಡು ನೋಡಲು ದಂಡಿ ತೇಜನ ತೋರಿದೇ
ನಿತ್ಯನಂದನ ನಾಮ ಮಂತ್ರದಿ ಮೃತ್ಯುಭೀತಿಯು ದೂರವೂ 3

ಭಂಟನಾಗಿಯು ಸೇವೆ ಮಾಡಿದ ಶಿಷ್ಯರೆಲ್ಲರ ಕಾಯುತಾ
ಒಂಟಿಯಾಗಿಯು ನಾಲ್ಕು ಕಾಲವು ಧ್ಯಾನ ಮಾಡಲು ನಿತ್ಯವೂ
ಎಂಟು ಯೋಗದಿ *ಘಂಟನಾದವ ಕೇಳುವಂತೆಯು ಮಾಡಿದೇ
ನಿತ್ಯನಂದನ ನಾಮ ಮಂತ್ರದಿ ಮೃತ್ಯುಭೀತಿಯು ದೂರವೂ 4

ಶ್ವಾಸ ಒಂದನು ನಿನ್ನ ಪಾದಕೆ ತಪ್ಪದಂತೆನಗಾಡಿಸೂ
ಈಶನಾಗಿಹ ಯೋಗಿ ರಾಜನೆ ದಾಸರಾಪರಿ ಮಾಡಿಸೂ
ವಾಸ ನಿನ್ನೊಳಗೆನ್ನ ಸೇರಿಸಿಕೊಳ್ಳೊ ಸದ್ಗುರು ದೇವನೆ
ನಿತ್ಯನಂದನ ನಾಮ ಮಂತ್ರದಿ ಮೃತ್ಯು ಭೀತಿಯು ದೂರವೂ 5

ವಾದ ಭೇಧವ ಮಾಡದಂತೆ ರೂಢಿಯಲ್ಲಿಯೆ ಭಕ್ತರಾ
ಆದಿ ಅಂತ್ಯಕೆ ಸಾಕ್ಷಿಯಾಗುತ ವೇದರೂಪಕ ನಾದೆಯೂ
ಗಾದೆ ಮಾತಿನ ರೂಪದಂತೆ ನಿತ್ಯಯನ್ನೊಳು ನಿಂತೆಯೂ
ನಿತ್ಯನಂದನ ನಾಮಮಂತ್ರದಿ ಮೃತ್ಯುಭೀತಿಯು ದೂರವೂ 6

ಭಕ್ತವತ್ಸಲನೆಂಬ ಸಾರವ ಶಕ್ತಿ ವಿದ್ಯದಿ ತೋರಿದೇ
ಭಕ್ತಿ ಭಾವವ ತುಂಬಿ ಕೊಂಡಿಹ ಶಿಷ್ಯರೆಲ್ಲರ ದೇಹದೀ
ಮುಕ್ತಿ ರಾಜ್ಯದ ರಾಜನಾಗಿಹೆ ಶಕ್ತಿ ರೂಪದ ದೇವನೇ
ನಿತ್ಯನಂದನ ನಾಮ ಮಂತ್ರದಿ ಮೃತ್ಯು ಭೀತಿಯು ದೂರವೂ

ಜಾತಿ-ಭೇದವ ಮಾಡದಂತೆ ನೀತಿ ಮಾರ್ಗವ ತೋರಿಸೂ
ಮಾತು ಮಾತಿಗೂ ಮಂತ್ರವೆನ್ನಯ ದೇಹಮಧ್ಯದಿ ಹಾಡಿಸೂ
ಶಾಂತಿ ರೂಪದ ಮಂತ್ರದಿಂದಲಿ ನೀಲಕಂಠನ ತೋರಿಸೂ
ನಿತ್ಯನಂದನ ನಾಮಮಂತ್ರದಿ ಮೃತ್ಯುಭೀತಿಯು ದೂರವೂ 8

ಶಾಂತಿ ಮಂತ್ರವ ಸಾರಿ ಭೋಧಿಸು ದೇವನಾಗಿಹ ಯೋಗಿಯೇ
ಭ್ರಾಂತಿಯೆಲ್ಲವ ನೀಗುವಂತಹ ಸಂತರಾ ಜತೆಗೂಡಿಸೂ
ಶಾಂತಿ ರೂಪದ ಲಿಂಗ ಮಧ್ಯದಿ ಸೇರಿಸೆನ್ನನು ದೇವನೇ
ನಿತ್ಯನಂದನ ನಾಮಮಂತ್ರದಿ ಮೃತ್ಯುಭೀತಿಯು ದೂರವೂ 9

ಸತ್ಯಸಾರಿದ ಯೋಗಿರಾಜನ ಪಾದ ಸೋಂಕಲು ಪಾವನಾ
ದತ್ತವಂಶದ ವಿದ್ಯದಿಂದಲಿ ಶಕ್ತಿತಾನೆಯು ಸೇರುತಾ
ಶಕ್ತಿಯಾಗಿಹ ಮಂತ್ರದಿಂದಲಿ ಮುಕ್ತನಾಗುವ ಭಕ್ತನೂ
ನಿತ್ಯನೇಮದಿ ಭಕ್ತನಾದ ಗೋವಿಂದನಾ ನುಡಿ ಪಾಲಿಸೂ 10

# ಶ್ರೀ ಶ್ರೀ ಶ್ರೀ ನಿತ್ಯಾನಂದ ಗುರುವಾಷ್ಟಕ

## ರಾಗ - ರಾಗಮಾಲಿಕ

ಸದಾ ಮಹಾದಯಾಕರಾದಿ ದೇವ ದೇವ ಯೋಗಿಯೇ
ವಿಶಾಲ ನೀಲ ತೋಯವಾಸ ಯೋಗಿರಾಜ ಪೂಜಿತ
ಸದಾವ ಕಾಲ ಯೋಗ ಮಾರ್ಗವನ್ನು ಇತ್ತು ರಕ್ಷಿಸು
ವಿದೇಹ ಭಾವನಾತ್ಮವಾದ ಯೋಗದಾರಿ ತೋರಿಸು
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು

ನಿಧಾನ ಶಾಂತಿಯಿಂದ ನಾದ ಬ್ರಹ್ಮದಲ್ಲಿ ನಿಂತೆಯು
ಸದಾವ ಕಾಲದಲ್ಲಿ ರಾಜಯೋಗದೊಳಗೆ ಸೇರಿದೆ
ಚರಾಚರಾದಿ ರೂಪದಲ್ಲಿ ಏಕಭಾವ ತೋರಿದೆ
ಅದಾವ ಲೀಲೆ ಗೈದು ಸಾಕ್ಷಿಭೂತನಾಗಿ ನಿಂತೆಯೋ
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 2

ಕಷಾಯ ವಸ್ತ್ರವನ್ನು ಹಾಕಲಿಲ್ಲ ನೀನು ದೇಹಕೆ
ವಿಷಾಧಿ ಅನ್ನವನ್ನು ನೀನು ಒಂದೆ ಎಂದು ಭಾವಿಸಿ
ವಿನೋದಕಾಗಿ ನಾಗಸರ್ಪ ಮುಂದೆ ಹಾಡಿ ತೋರಿದೆ
ಪ್ರಕಾಶವಾಗಿ ಸೂರ್ಯನಂತೆ ಭೂಮಿಯಲ್ಲಿ ನಿಂದೆಯೂ
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 3

ವಿಚಾರವಾದ ಓದನೆಂದು ಓದಲಿಲ್ಲ ದೇವನೀ
ಶರೀರ ಭಾವದಾಚೆ ನಿಂತ ಯೋಗಿರಾಜ ಪೂಜ್ಯನೇ
ಗಣಾಧಿ ಪೂಜ್ಯನಾಗಿ ನೀನು ಲೋಕದಲ್ಲಿ ತೋರಿದೆ
ಸದಾವಕಾಲ ಲೀಲೆಯಿಂದ ಧ್ಯಾನದಲ್ಲಿ ನಿಂತೆಯು
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 4

ಕುಬೇರನಂತೆ ನೀನು ಭಕ್ತರಿಂಗೆ ಶಕ್ತಿಮೀರಿ ನೀಡಿದೆ
ಸುಧಾಮನಂತೆ ಬಂದ ಭಕ್ತರನ್ನು ನೀನು ಪೊರೆದೆಯೋ
ಅಘಾದ ಬ್ರಹ್ಮವಿದ್ಯೆಯನ್ನು ಸತ್ಯದಿಂದ ಸಾರಿದೆ
ಸದಾವಕಾಲ ಭಾವನಾತ್ಮವಾಗಿ ನಿಂದೆ ಭಕ್ತರೊಳಗೆ
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 5

ಅಪಾರವಾದ ಅಷ್ಟಸಿದ್ಧಿಯಿಂದ ಲೋಕ ಪಾಲಿಸಿ
ಕುಮಾರರಂತೆ ಶಿಷ್ಯರಿಗೆ ವೇದವಿದ್ಯೆ ನೀಡಿದೆ
ತದೇಕವಾಗಿ ನಾಮವನ್ನು ಹಾಡಿಪಾಡಿ ತೋರಿದೆ
ಕಲಾತ್ಮಕಾರ ಯೋಗಿರಾಜ ನಿನ್ನ ವಿದ್ಯೆಸಾಗರ
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 6

ಶರೀರಧಾರಿಯಾಗಿ ಲೋಕದಲ್ಲಿ ಸತ್ಯ ಬೀರಿದೆ
ಗಣಾಧಿರೂಪ ಶಾಂತನಾಗಿ ಸಾಧನಾದಿ ಮಾರ್ಗದೊಳಗೆ
ಸಮಾಧಿ ಶೂನ್ಯ ಭಾವನಾಗಿ ದೇವನಾಗಿ ತೋರಿದೆ
ಕಪಾಲಮಾಲ ಭಸ್ಮದಾರಿ ಯೋಗಿದೇವ ಪೂಜ್ಯನೆ
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 7

ಷಡಕ್ಷರಾದಿ ಸೂತ್ರಮಾತ್ರ ಯೋಗಿರಾಜ ಪೂಜ್ಯನೇ
ಪತಂಜಲೀಯು ಗೌತಮಾದಿ ಸೂತ್ರ ವಿದ್ಯೆಯನ್ನು ನೀ
ಸರಸ್ವತೀಯ ಪುತ್ರನಂತೆ ವೇದವಾದ ಗೆಲ್ಲುತ
ಸಶಾಂತ ಮೂರ್ತಿಯಾಗಿ ನೀ ಪ್ರಶಾಂತವಾಗಿ ನಿಂದೆಯು
ಪರಾತ್ಪರಾದಿ ವೇದಮೂರ್ತಿ ಯೋಗಿರಾಜ ಪೂಜಿತ
ಮಮಪ್ರಣಾಮ ದತ್ತಮೂರ್ತಿ ನಿತ್ಯನಂದ ಸದ್ಗುರು 8

ಶ್ರೀ ಗುರಾಶೀರ್ವಾದ ಬಲದಿಂ ಗುರುಪ್ರೇರಿತ ಗುರುಚರಣ
ಸೇವಕ ಗೋವಿಂದ ವಿರಚಿತ ಶ್ರೀನಿತ್ಯಾನಂದಾಷ್ಟಕಮುಂ ದಿನ
ನಿತ್ಯ ಸಕಲ ಸಂಶಯುವಳಿದು ಶಾಂತಿಯಿಂದಲಿ ಪಠಿಸಿದೊಡೆ
ಇಷ್ಟಾರ್ಥ ಸಿದ್ದಿಸಿ ಶ್ರೀಗುರು ಕೃಪಾಶೀರ್ವಾದ ಬಲದಿಂ ಶಿವ
ಸಾಯುಜ್ಯ ದೊರಕುವುದು. 9

# ಶ್ರೀ ನಿತ್ಯಾನಂದ ಅವಧೂತರ ಸುಪ್ರಭಾತ

ವಂದಿಸುವೆ ಗುರುರಾಯ ಸೂರ್ಯನುದಯಿಸುತಿಹನು
ಚಂದದಲಿ ಏಳಯ್ಯ ನಿತ್ಯಾನಂದ ಪರಬ್ರಹ್ಮ
ಮಂದಮತಿಯಾದೆನ್ನ ಹೃದಯದೊಳು ನೆಲಸುತ
ಬಂದ ದುರಿತಗಳಳಿಸಿ ನಿಂದು ಶಿವನನು ತೋರಿಸೈ
ಶ್ರೀ ನಿತ್ಯಾನಂದ ಗುರುದೇವ ತವ ಸುಪ್ರಭಾತ 1

ಎಲ್ಲರೆದೆಯೊಳಿಹ ಕತ್ತಲೆಯ ಕಳೆಯೆಂದು ಬೇಡುವೆ
ಬಲ್ಲಂತ ಗುರುದೇವ ಸೂರ್ಯನನು ಪಸರಿಸೈ
ಅಲ್ಲ ಅಹುದೆಂದು ಹೇಳುವರ ಸೊಲ್ಲನಡಗಿಸಿದೆ
ಮಲ್ಲನೂ ಯೋಗದಿ ನಿನ್ನ ಸಮರಾರು ಹೇಳಯ್ಯಾ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 2

ನಿನ್ನ ಸುಪ್ರಭಾತವನು ಹಲವರು ಹಾಡಿರುವರೂ
ಮುನ್ನ ನೀಮಲಗಿದರೆ ಜಗವು ಮಲಗುವುದುತಾ
ಇನ್ನು ಜಾಗ್ರದೊಳಿರೆ ಜಗವು ನಡೆಯುವುದೂ
ನಿನ್ನನರಿಯದೆ ಸುಪ್ರಭಾತ ಹೇಳುವರು ಜನ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ

ಸುಪ್ರಭಾತ ಹಾಡುವುದು ಭಕ್ತರನೇಳಿಸಲು
ಅಪ್ರತಿಮ ಗುರುದೇವ ಎನ್ನಮನ ನಿನ್ನಯ
ಸುಪ್ರಭಾತದೊಳ್ ಬೆರೆಸೆನ್ನ ಜಾಗೃತಿಗೊಳಿಸಿ
ವಿಪ್ರನನು ಮಾಡೆಂದು ಚರಣಕೆರಗುವೆ ಗುರುವೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ

ಯಲ್ಲಮನುಜರಂತಿದ್ದ ಈಶ್ವರಿ ಅಯ್ಯರಾ
ಬಲ್ಲವನು ಭುವಿಯೊಳಗೆ ನೀನೊಬ್ಬನೆ ಗುರುವೆ
ಎಲ್ಲ ಸಂಶಯುವನಳಿಸಿ ಪೊರೆಯುತಲಿ ನಿತ್ಯವು
ಮಲ್ಲನನು ಮಾಡಿದರು ಯೋಗದಲಿ ನಿನ್ನಗುರುವೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 5

ಬಾಲನಾಗಿರುವಾಗಲೆ ಯೋಗದೊಳು ನೆಲೆಸಿದೆ
ಲೋಲ ಮೂರುತಿ ಕಾಲನನು ಶಿವನೊಳು ಬೆರೆಸುತ
ಲೀಲೆಯಿಂದಲಿ ಗುರುವೆ ನಿತ್ಯಯೋಗ ಸಾಧಿಸಿ
ಕಾಲನನು ಗೆಲಿದಿರುವೆ ಪರಬ್ರಹ್ಮ ಮೂರುತಿ
ಶ್ರೀ ನಿತ್ಯಾನಂದ ಗುರುದೇವ ತವ ಸುಪ್ರಭಾತ 6

ಮಂತ್ರದೊಳು ತಂತ್ರವನು ಸೇರಿಸಿದೆ ಗುರುವೆ
ಯಂತ್ರದಂತೆ ನೀನು ನಿತ್ಯವೂ ಸಾಧಿಸಿದೇ
ಶಾಂತಿಯಿಂದ ಬಿಡದೆ ನಿತ್ಯಧ್ಯಾನ ಗೈಯುತಾ
ಭ್ರಾಂತಿಯೆಲ್ಲವ ಶಾಂತಿಯಿಂದಲಿ ಕಳೆದೆ ಗುರುವೆ
ಶ್ರೀ ನಿತ್ಯಾನಂದ ಗುರುದೇವ ತವ ಸುಪ್ರಭಾತ 7

ಸತ್ಯ ಶಾಂತಿಯ ಬೀರಿ ಸಲಹಿದೆ ಯೋಗಿರಾಜನೆ
ನಿತ್ಯ ಬಾಲರಾ ಜೊತೆಗಾಡಿದ ಸತ್ಯಮೂರ್ತಿಯೆ
ಮಿಥ್ಯೆಯಳಿದು ಭಕ್ತರೆಲ್ಲರ ಚಿತ್ತದೊಳಗೆ ನಿಂತು
ಅತ್ಯಾನಂದದಿ ಶಿಷ್ಯರೆಲ್ಲರ ಪಾಲಿಸಿದೆ ಜಗದೀ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 8

ದತ್ತವಂಶದ ವಿದ್ಯೆಯ ಭುವಿಯೊಳಗೆ ಸಾರುತ
ಉತ್ತಮರ ಮಾಡಿದೆಯು ಮನುಜರನು ಭುವಿಯೊಳಗೆ
ಚಿತ್ತದೊಳು ನೀನಿಂತು ಸತ್ಯಶಾಸ್ತ್ರ ಸಾರುತಾ
ಯೆತ್ತ ನೋಡಲು ಚಿತ್‌ಪ್ರಭೆಯ ಕಾಂತಿ ತೋರಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 9

ಜಗದುದಯ ಕಾರಣ ಶ್ರೀ ಗುರುವೆ ಪರಬ್ರಹ್ಮ
ಜಗದಾದಿ ರಕ್ಷಕ ಮಹಾಮಹಿಮೆ ವಂದಿತನೆ
ಜಗದೊಳಗೆ ಜೀವರಿಗೆ ಪ್ರಭುವಾಗಿ ತೋರಿದೆ
ಜಗದೊಳಗಣಿತ ಮಹಿಮೆ ತೋರಿದೆಯು ಗುರುದೇವ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 10

ನಾದಬಿಂದು ಕಳೆಗಳನು ನೀತೋರಿ ಸಲಹಿದೆ
ವಾದ ವಶ್ಯಗಳೆಲ್ಲ ನೀದೂರ ಗೈಯುತಾ
ಕ್ರೋಧವನು ಬಿಡಿಸಿ ಸಾಧನೆಯ ಮಾರ್ಗ ತೋರಿದೆ
ಆದಿ ಮಂಗಳ ಮೂರುತಿ ನೀನೆನಿಸಿದೆ ಜಗದಿ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 11

ಅಂಡದೊಳಗಡಗಿರುವ ವಿವರವನು ಖಂಡಿತದಿ
ಪಿಂಡದೊಳು ನೀತೋರಿ ಸಲಹಿದೆ ಗುರುದೇವಾ
ಅಂಡ ಪಿಂಡಾಂಡ ಮಧ್ಯದಿ ಬ್ರಹ್ಮಾಂಡ ತೋರಿದೆ
ಪಂಡಿತನು ನೀನು ಜಗದೊಳಗೆ ಖಂಡಿತ ಸತ್ಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 12

ಖಂಡಿತ ನೀನಿಂತು ಸತ್ಯವ ಬೆಳಗಿದೆ ಗುರುವೆ
ಪಿಂಡದೊಳು ಜೀವನನು ಶಿವನೊಳಗೆ ಬೆರೆಸುತಲಿ
ಕಿಂಡಿಯಲಿ ಚಿದ್ರೂಪ ವಿದ್ಯುಲ್ಲೇಖೆಯ್ಯೊಳಗೆಯು
ಪಂಡಿತನೆ ತೇಜದಲಿ ನೀನಿಂತು ಮೆರೆದೆಯು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 13

ವೇದ ವಿದ್ಯೆಗೆ ನೀನು ಸಿಲುಕದೇ ನಿಂತಿರುವೆ
ವಾದ ವಶ್ಯಗಳಿಗೆ ದೊರಕದಂತಿರುವೆ ದೇವ
ಆದಿ ಅಂತ್ಯ ತಾನರಿತು ಪ್ರಣವ ರೂಪದಲಿ
ಮೇದಿನಿಯೊಳು ಸದ್ಭಕ್ತರ ಪಾಲಿಸಿದೆ ಗುರುವೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 14

ಶರಣರೆಲ್ಲರ ಸಲಹುವ ಸಲುವಾಗಿ ಗುರುವೇ
ಧರಣಿಯಲ್ಲಿ ನರರೂಪದಿ ಬಂದು ಕರುಣಿಸಿದೆ
ಹರನೊಳಗೆ ಬೆರೆಸಿ ಮರಣವ ಕಳೆಸಿದೆ ಗುರುವೆ
ಪರಮ ಪದವಿಯ. ಪಡೆವಂತೆ ಭರದಿ ಕರುಣಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 15

ಹಲವು ಪುಷ್ಪಗಳನ್ನು ಭಕ್ತರು ತಂದು ಜಗದಿ
ಛಲವು ಮಾಡಿ ನಿಮ್ಮ ಸೇವೆ ಮಾಡುತಿರುತಿಹರೂ
ಫಲವು ನಿಮ್ಮಯ ಪಾದವೆಂಬ ಭಕ್ತ ಜನರಿಗೆ
ಒಲಿದು ಬಂದು ಭಕ್ತರನು ಛಲದಿ ಪಾಲಿಸಿದೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 16

ವಾನರೀತಪವನ್ನು ಕಾನನದಿ ಮಾಡಿದೆಯೋ
ತಾನಾರು ಎಂಬುದ ಚೆನ್ನಾಗಿ ತಿಳಿದು ಜಗದಿ
ಮಾನ ಅಭಿಮಾನವ ಕಳೆದು ನಿರ್ಭಯದಿ ನಿಂತೆ
ಜ್ಞಾನ ಮೂರುತಿ ಶಿವನಾಗಿ ಜಗದೊಳಗೆ ಮೆರೆದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 17

ವಾನರಿ ತಪವ ಮಾಡಿದಾ ಸ್ಥಳದಿ ನೀನಿಂತು
ಜ್ಞಾನಿಯನು ಮಾಡಿದೆ ಜನಾನಂದರನು ಗುರುವೆ
ಮಾನ ಅಭಿಮಾನವನು ಅಳಿದು ಧ್ಯಾನಿಪರ ಸಲಹುತಾ
ಧ್ಯಾನ ಮಾಡಿದಾ ಸ್ಥಳ ನಿತ್ಯಕ್ಷೇತ್ರ ಮಾಡಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 18

ಮೂಡಣದಿ ದಿನಕರನು ಉದಯವಾಗುವ ಪರಿಯು
ಗೂಢವಾದ ಯೋಗ ನಿದ್ರೆಯೊಳು ಮಲಗಿದೆಯೋ
ರೂಢಿಯೊಳು ಪಡುವಣ ಚಿತ್ ಸೂರ್ಯನಲಿ ಬೆರೆತೂ
ನೋಡುವರ ಮನಸಿನ ಕ್ಲೇಶವ ದೂರಗೈದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 19

ಅಕ್ಷರದ ಮರ್ಮವ ಕುಕ್ಷಿಯೊಳು ತಿಳಿಸಿ ನಿತ್ಯವು
ರಕ್ಷಕನು ನೀನಾಗಿ ಜಗದೊಳು ಮೆರೆದೆ ತಂದೆ
ಲಕ್ಷವನು ನಿಲ್ಲಿಸುತ ಸಾಕ್ಷಿಯನು ತೋರಿಸಿದೆ
ಚಿಕ್ಷುಗಳ ಮಧ್ಯದಿ ತಾರಕದಿ ಮನನಿಲಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 20

ಅಣಿಮಾದಿ ಸಿದ್ಧಿಗಳೊಡೆಯನಾಗಿಯೇ
ಗುಣಕತೀತನು ನೀನೆಸಿ ಜಗದೊಳಗೆ ಮೆರೆದೆ
ಗಣಪತಿಯ ತೆರದಲಿ ಪಾರ್ವತಿಗೆ ಪ್ರಿಯನಾಗಿ
ಫಣಿ ರಾಜನನ್ನು ನಿನ್ನೆದುರಿನೊಳಗಾಡಿಸಿದೆಯು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 21

ಗುರುವಿದ್ಯೆ ಪಡೆದು ಗುರುವಾಗಿ ಸಾಕ್ಷಿ ತೋರಿ
ಅರುಹು ಎಲ್ಲವ ನೀನು ಕುರುಹಿನಲಿ ನೋಡಿದೆ
ಮುರಹರನ ಪರಿಭಕ್ತರ ಧರುಣಿಯಲಿ ಕರುಣಿಸೀ
ನರಜನರ ಪರಿಪರಿಯ ವಿಧದಿಂದ ಪಾಲಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 22

ವಾದ ಭೇದಗಳಳಿದ ಆದಿಮಂಗಳ ಮೂರ್ತಿ
ವೇದ ಪುರುಷನು ನೀನೆ ಜಗದೊಳಗೆ ಪ್ರಭುವೆ
ನಾದ ಬಿಂದು ಕಳೆಗಳ ಮೀರಿದಾನಂದದಲಿ
ಮೇದಿನಿಯೊಳು ನಿನ್ನ ಸರಿಸಮರಾರು ಗುರುವೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 23

ಜಗಕೆ ಆದಿಯು ನೀನು ಗುರುಬ್ರಹ್ಮ ಸ್ವರೂಪ
ಜಗವ ರಕ್ಷಿಪೆಯು ನೀನು ಗುರುವೆ ವಿಷ್ಣುರೂಪಾ
ಜಗವ ಲಯಿಪೆ ನೀನು ಸಾಕ್ಷಾತ್ ಶಿವರೂಪದಿ
ಜಗದೊಳಗೆ ನಿನ್ನ ಮಹಿಮೆ ಅರಿವುದಸಾಧ್ಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 24

ದೃಷ್ಟಿ ಮಾತ್ರದಿ ಜಗದ ಉದಯವಾಗುವುದು ನೋಡು
ದೃಷ್ಟಿ ಮಾತ್ರದಿ ಜಗವು ಲೀಲೆಯಲಿ ನಡೆಯುವುದು
ದೃಷ್ಟಿಯಾ ನಿರ್ಲಿಪ್ತ ಜಗಕೆ ತೋರಿದೆ ಸಾಕ್ಷಿಯಾ
ದೃಷ್ಟಿಯೊಳಾದಿ ಅಂತ್ಯದ ಕಾರಣವ ತೋರಿದೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 25

ಅಂಗದಲಿ ಲಿಂಗವನು ನೀಧರಿಸದೆ ನಿತ್ಯ
ಲಿಂಗಾಗ ಮಯನಾಗಿ ಜಂಗಮನು ತಾನಾದೆ
ಸಂಗಮನ ಕೃಪೆಯಿಂದ ನಿತ್ಯನಂಬಿದ ಜನಕೆ
ಮಂಗಳಾತ್ಮಕವಾದ ಲಿಂಗವನಿತ್ತು ಪೊರೆದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 26

ಕಾಯಕವೆ ನೀನೆಂದು ಜಗದೊಳಗೆ ತಿಳಿಸುತಲಿ
ನ್ಯಾಯ ಮಾರ್ಗದಲಿ ನಡೆಯುವಂತೆನ್ನ ಮಾಡಿದೆ
ಬಾಯಿಯಿಂದಲಿ ನಿನ್ನ ನಾಮವನು ಹಾಡಿಸಿದೆ
ನಾಯಕನೆ ನಿನ್ನ ಸೇವೆಯನು ಕರುಣಿಸಿ ಸಲಹು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 27

ಗುರುವನದಿ ನೀನಿಂತು ಹರನೆನಿಸಿ ಮೆರೆಯುತಲಿ
ಸಿರಿಯ ಭಾಗ್ಯವನು ಕೌಪೀನದೊಳು ನೀಡಿದೆಯು
ಹಿರಿಯ ನಿನ್ನಯ ಮಹಿಮೆ ನರರು ಅರಿವುದಸಾಧ್ಯ
ಪರಮ ದಯಾಕರನೆ ಧರೆಯೊಳಗೆ ಯೋಗಿರಾಜ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 28

ಭಕ್ತರೆಲ್ಲರು ದರುಶನಕೆ ಕಾದು ನಿಂತಿಹರೂ
ಶಕ್ತಿಮಾತೆಯ ಕೃಪೆಯ ನೀಡಿ ಸಲಹು ಸ್ವಾಮಿ
ಯುಕ್ತಿವಚನಗಳಿಂದ ಬೇಡುವೆ ದಯಾಕರನೆ
ಮುಕ್ತಿ ಮಾರ್ಗವನೀವ ವಿದ್ಯೆಯ ನೀಡು ಗುರುವೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 29

ಬರಿಯ ಮಾತಿನ ವೇದಾಂತಿಗಳಿಗೆ ದೊರಕದೇ
ಅರಿತು ನಿನ್ನ ಭಜಿಸಿದವರ ಸಂಶಯವನಳಿದೆ
ವಿರತಿ ಭಕುತಿಲಿ ನಡೆದ ಯತಿವರರ ಕರುಣಿಸುತ
ಪರಮ ಗುಪಿತದ ಯೋಗ ಮಾರ್ಗದಲಿ ರಕ್ಷಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 30

ಮಂಗಳಾಮಯನಾದ ಗುರುದೇವ ಭುವಿಯೊಳಗೆ
ಮಂಗಳೂರಿಗೆ ಬಂದು ತುಳಸಿ ದೇವಿಗೊಲಿಯುತ
ಕಂಗಳಾ ಮಧ್ಯ ನೀನಿಂತು ಬೆಳಗಿ ನಿತ್ಯವು
ತಿಂಗಳ ಬೆಳಕಿನೊಳಾಡಿಸಿದೆ ತುಳಸಿ ದೇವಿಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 31

ಭಕ್ತಿ ಭಾವದಿ ನಡೆದ ರಮಾದೇವಿಗೊಲಿಯುತ
ಶಕ್ತಿ ಪಾತವ ನೀಡುತಲಿ ಜಗದೊಳಗೆ ಗುರುವೆ
ಯುಕ್ತಿಯಿಂದಲಿ ಸಾಧಿಸುವ ದಾರಿಯನು ತೋರಿಸುತ
ಮುಕ್ತಿಮಂಟಪ ಸೇರುವಂತೆ ಮಾಡಿದೆ ತಂದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 32

ಇಳೆಯೊಳಗೆ ಭಂಟವಾಳಕೆ ಬಂದೆ ಗುರುದೇವ
ಮಳೆಯ ಕಾಲದಿ ಅಂಗಡಿಯ ಮುಂದೆ ನಿಲ್ಲೆ ನಿನಗೆ
ತಿಳಿಯದೆಲೆ ಮಂದ ಮತಿಗಳು ನೀರನೆರಸಲೂ
ಪ್ರಳಯ ರುದ್ರಗೆ ಕೋಪ ಬಂದಂತೆ ಶಪಿಸಿದೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 33

ಅರಿವು ಇಲ್ಲದೆ ಮಳೆಯೊಳಗೆ ನಿಂತೆಯುಗುರುವೆ
ಪರಮ ಗುರು ಶಾಪದಿಂ ವಿಪರೀತ ಮಳೆಸುರಿಯೆ
ಥರಥರ ನಡಗುವಂತೆ ನೇತ್ರಾವತಿ ಉಕ್ಕಿತು
ಪರಿಪರಿಯ ವಿಧಧಿ ಬೇಡೆ ಪ್ರವಾಹ ತಗ್ಗಿತು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 34

ಇಂದು ನಿತ್ಯಾನಂದರನು ಭಂಟವಾಳದ ಜನ
ಸಂದೇಹ ಪಡದೆ ಎಲ್ಲ ಮನೆಯಲಿ ಪೂಜಿಪರು
ಇಂದು ನೇತ್ರಾವತಿ ಉಕ್ಕೆ ನಿತ್ಯಾನಂದರ
ಚಂದದಿಂ ಪೂಜಿಸೆ ಶಾಂತವಾಗಿ ಹರಸುವಳು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 35

ನಿತ್ಯ ನಿನ್ನ ಸೇವೆಯನು ಭಯವಾಗಿ ಮಾಡಿದ
ಉತ್ತಮದ ಶೆಟ್ಟಿಗೆಯು ಮಾರುತಿ ದರ್ಶನವಿತ್ತೆ
ಪ್ರತ್ಯಗಾತ್ಮಕನೆ ವಟವೃಕ್ಷದಲಿ ನಿಂದೂ
ಚಿತ್ತದಿಂ ಮಾರುತಿಗೆ ಮಂತ್ರವನು ಭೋಧಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 36

ಕಾನನದಿ ನಡೆವಾಗ ಮಕ್ಕಳಿಲ್ಲದ ಮಾತೇ
ಮಾನಅಭಿಮಾನ ತೊರೆಯುತಾ ಕುಚವ ಹಿಂಡಿದೆ
ತಾನುಮಾಡಿದ ಕೆಲಸಕೆ ಜನ ಕಲ್ಲನೆಸೆಯಲು
ಏನುಹೇಳಲಿ ಕುಚದೊಳಗೆ ವಿಷವಿರಲು ತೆಗೆದೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 37

ದತ್ತದೇವಸ್ಥಾನ ಮುಂದಿರುವ ಹೊಂಡದಲಿ
ಚಿತ್ತದಿಂ ನಿನಗಿತ್ತ ಮಗುವ ನೀರಿಗೆಸೆದೆಯು
ಅತ್ತು ಬೇಡಲು ಪ್ರತ್ಯಗಾತ್ಮನಾದ ಗುರುವೆ
ಸತ್ತು ಹುಟ್ಟಿದ ತೆರದಿ ಮಗುವನ್ನು ಬದುಕಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 38

ಮಗುವ ಬದುಕಿಸಿದ ಸುದ್ದಿಯ ಅಪ್ಪಯ್ಯ ಕೇಳಿ
ಹೊಗೆಸೊಪ್ಪಿನ ಮೂರು ಎಸಳನು ನೀಡಲಾಗ ನಿ
ನಗೆ ನಾನು ಸೇವಿಸೆ ನಿನಗೆ ಮರಣ ಬರುವುದೆನುತ
ನಗಲು ಅಪ್ಪಯ್ಯ ಪಂಡಿತ ಮರಣಹೊಂದಿದನು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 39

ಅಪ್ಪಯ್ಯ ಪಂಡಿತನ ಮಗನು ನಿನ್ನ ಹೊಡೆಯಲು
ತಪ್ಪದೆ ರಕ್ತವನು ಕಾರುತ ಮರಣ ಹೊಂದಿದ
ದಪ್ಪಗೆ ಊದಿಕೊಂಡಿತು ದತ್ತಾತ್ರೇಯ ಮುಖ
ಇಪ್ಪಜನ ದತ್ತಗಭಿಷೇಕ ಮಾಡೆ ಬದುಕಿಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 40

ಉಡುಪಿ ಕೃಷ್ಣನಾ ದರ್ಶನಕೆ ಗುರುಗಳೋಗಲು
ಉಡುಪು ವಸ್ತ್ರವಿಲ್ಲದ ನೋಡಿ ಒಳಗೆ ಬಿಡದಿರೆ
ಸುಡುವ ಬಿಸಿಲಿನ ತಾಪದಲಿ ಒಳಗೆ ನುಗ್ಗಿದರು
ಫಢಫಢನೆ ಕಲ್ಲುಗಳ ಗುರುಗಳಿಗೆಸೆಯಲಾಗ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 41

ಎಸೆದ ಕಲ್ಲುಗಳೆಲ್ಲ ರತ್ನಗಳಾಗಿ ಕಾಣುತ
ಅಸಮ ನೋಡುವ ಜನರ ಕಣ್ಣಿಗೆ ಹೊಳೆಯುತಿರೆ
ಎಸೆದ ಜನರೇ ರತ್ನಗಳ ಬಾಚಿಕೊಳ್ಳುತಿರೆ
ನುಸುಳಿಹೋಗಿಯೆ ಕೃಷ್ಣನಾದರ್ಶನ ಮಾಡಿದೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 42

ಕೊಲ್ಲೂರ ಮೂಕಾಂಬಿಕಾಲಯಕೆ ನೀ ಬಂದು
ಉಲ್ಲಾಸದೊಳು ಭಕ್ತರ ಸಲುಹುತಲಿ ನಿತ್ಯವು
ಅಲ್ಲೆ ನಿರ್ಮಿಸಿದೆ ನಿನ್ನಯಾಶ್ರಮವ ಕೇಳ್ಬೆ
ಬಲ್ಲವರು ನಿತ್ಯಪೂಜಿಪರು ನಿನ್ನಮೂರ್ತಿಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 43

ಕಂಡಕಂಡವರ ಪಾದಕೆ ಬೀಳುವ ಮನುಜನ
ಖಂಡಿತ ನೀನು ಮಗನಿಗೆ ಯಮರಾಜನ ಕರೆದು
ಹಿಂಡು ಜನರೆದುರು ಗುರುವೆ ಆಯುಷ್ಯ ನೀಡಿದೆ
ದಂಡಿ ತೇಜನೆ ನಿನ್ನ ಮಹಿಮೆ ಅರಿವುದಸಾಧ್ಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 44

ವಜ್ರಾಯುಧವ ನುಂಗಿ ಬಾಯಿಂದ ಉಗುಳಿದುದಕೆ
ವಜ್ರೇಶ್ವರಿ ಮಾತಾ ಎಂಬ ನಾಮವಾಯಿತು
ವಜ್ರೇಶ್ವರಿ ತಪೋಭೂಮಿಯಾದ ಕಾರಣವೆ
ಈ ಜಗದೊಡೆಯ ನಿತ್ಯಾನಂದರಲ್ಲಿ ನಿಂದುದು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 45

ಮುಕ್ತಾನಂದರನು ನಿತ್ಯ ಆಶೀರ್ವದಿಸುತ
ಭಕ್ತಿಭಾವ ತುಂಬಿ ಜಗದಿ ನಡೆವಂತೆ ಮಾಡಿ
ಯುಕ್ತಿಯಿಂದಲಿ ಯೋಗ ಸೂತ್ರವ ತಿಳಿಸುತಲಿ
ಶಕ್ತಿ ಮಾತೆಯ ಕೃಪೆಯು ಕರುಣಿಸಿದೆ ಜಗದೊಳಗೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 46

ಹುಟ್ಟು ಮೂಕನಾದ ಶೆಟ್ಟಿಯ ಮಾತನಾಡಿಸಿದೆ
ದಿಟ್ಟ ತನದೊಳಾತನಿಂದ ಸೇವೆ ಮಾಡಿಸಿದೆ
ಕೆಟ್ಟ ಜನರ ಕಂಡರೆ ಸುಟ್ಟು ಭಸ್ಮಮಾಡುವೆ
ನಟ್ಟ ದೃಷ್ಟಿಲಿ ನೋಡಿದವರ ಪಾವನಗೈದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 47

ಸತ್ಯವಾಗಿಯೆ ಕೋಪಾಗ್ನಿ ತ್ಯಜಿಸಿದೆ ಜಗದಿ
ನಿತ್ಯ ಅಗ್ನಿಕುಂಡದಿ ಮುಳುಗಿ ಸ್ನಾನಗೈದೆ
ಪ್ರತ್ಯಗಾತ್ಮ ತಪವೆಂಬಗ್ನಿ ಪ್ರಜ್ವಲಿಸುತ
ಆತ್ಮಾನಂದದಲಿ ನಿತ್ಯ ಶಿವನಾಗಿ ಮೆರೆದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 48

ಭಾವ ಚಿತ್ರಗಳ ಸುವರ್ಣನ ಕೈಯಿಂದ ತೆಗೆಸಿ
ಕಾವ ದೇವನೆ ಸುವರ್ಣನ ಪಾವನ ಮಾಡಿದೆಯು
ಆವ ಕಾಲಕು ಭಾವಚಿತ್ರ ದೊರಕುವಂತೆಯು
ಸೇವೆ ಮಾಡಿಯೆ ನಿನ್ನಪಾದ ಸೇರಿದ ಸುವರ್ಣ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 49

ಕಲಿಯುಗದಿ ಶಾಂತಿ ಕಹಳೆಯನೂದಿದೆ ಗುರುವೆ
ಬಲವು ನಿನ್ನಯ ಯೋಗವಿದ್ಯದ ತೇಜದಿಂದ
ಚಲವು ಮಾಡಿಯೆ ಶಿಷ್ಯರನು ಸಲಹಿಪೊರೆಯುತ
ಫಲವ ನೀಡುತ ಶಿಷ್ಯರ ಗುರುತೆರದಿ ಮಾಡಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 50

ನಿತ್ಯ ಶಾಂತಿಯ ಬೀರಿ ನಿತ್ಯಾನಂದನೆನಿಸಿದೆ
ಸತ್ಯವಾಗಿ ನಡೆದ ಸದ್ಭಕ್ತರ ಪಾಲಿಸಿದೆ
ನಿತ್ಯದರ್ಶಿಸಿದ ಭಕ್ತರಿಷ್ಟಾರ್ಥ ನೀಡುತಾ
ಮಿಥ್ಯೆಯಾಡದೆ ರೂಢಿಯಲಿ ನಡೆದು ತೋರಿದೆಯು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 51

ನಿನ್ನ ದರ್ಶಿಸುವ ಕಾಲದಿ ಮೈಸೂರ ಪುರದಿ
ಇನ್ನು ಬಂದಿಹೆನೆನಲು ಕರೀಂಪೀರಚಂದ್ರರಿಗೆ
ಮುನ್ನ ಮೈಸೂರಿನೊಳು ನೆಲಸುವಂತೆ ಮಾಡಿಸಿ
ನಿನ್ನ ಆಶ್ರಮವಾಗಿ ನಿತ್ಯ ಪೂಜೆಯಾಗುತಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 52

ಗುರುಬ್ರಹ್ಮನೆಂಬುದಕೆ ಸಾಕ್ಷಿ ನೀ ತೋರಿ
ವರವ ನೀಡುತಲಿ ಸಂತಾನವನು ಕರುಣಿಸಿದೆ
ನರರಿಗೆ ಜ್ಞಾನವನು ಕರುಣಿಸಿ ಪೊರೆಯುತಲಿ
ಪರಮ ಜ್ಞಾನಿ ಯೋಗಿವರ್ಯನೆನಿಸಿದೆ ಜಗದಿ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 53

ಗುರುವಿಷ್ಣು ಎಂಬುದಕೆ ಸಾಕ್ಷಿಯನು ತೋರಿದೆ
ಅರಿವು ಮರೆವುಗಳೆಲ್ಲ ಕಳೆಯುತಲಿ ನಿತ್ಯವು
ದುರಿತವನು ಹರಿಸಿ ನರರ ವ್ಯಾಧಿಯ ಕಳೆಯುತಲಿ
ಸುರರ ಸಮಾನ ನರರ ಮಾಡಿದೆ ಜಗದೊಳಗೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 54

ಗುರುವೆ ಪರಶಿವನೆಂಬುದನು ತೋರಲೋಸುಗವೆ
ಕರುಣವನು ಬೀರಿ ಭಕ್ತರ ಮರಣವ ಕಳೆದೆಯೂ
ಶರಣರನು ಧರಣಿಯಲಿ ಶಿವ ಮಂತ್ರ ಮಹಿಮದಿ
ಪರಮ ಪಾವನ ಗೈದು ನರರ ಗುರುವ ಮಾಡಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 55

ಪ್ರತಿ ಉದಯ ಕಾಲದೊಳು ನಿನ್ನನಾಮವನು
ಸ್ಮೃತಿಗೊಳಿಸಿ ಯನ್ನಮನದಿಂದಾಡಿಸಿದೆಯು
ಶೃತಿಗಳೊಪ್ಪುವಂತೆನ್ನ ನಾಲಿಗೆಯೊಳು ನಿಂದು
ಕೃತಿಯ ರಚಿಸುವಂತೆನ್ನ ಮನದೊಳಗೆ ಸೇರಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 56

ಯನ್ನ ಬಲಶ್ವಾಸ ನಿತ್ಯಾನಂದರೆ ಸೂರ್ಯ
ಯನ್ನ ಎಡಶ್ವಾಸ ಕರೀಂಪೀರ ಚಂದ್ರರೂ
ಮುನ್ನ ಗುರುಗಳೀರ್ವರೂ ಕೂಡುವಾ ಸ್ಥಳದಲಿ
ತನ್ನ ಜನ್ಮವ ಕಳೆದು ಚಿದ್ರೂಪದಲಿ ಬೆರೆಸಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 57

ಮಡದಿ ಮಕ್ಕಳು ಸಹಿತ ಭಕ್ತರು ಬಂದು ಸೇರಿ
ಬಿಡದೆ ಮೂರು ದಿವಸವಿಲ್ಲಿ ಜಾತ್ರೆ ನಡೆದು
ಕುಡಿಯಲೂ ಸಹಾ ನೀರು ಸಿಗದಂತಾಗುವುದು
ನುಡಿಯ ಲಾಲಿಸಿರೆಂದು ತಿಳಿಸಿದೆ ಗುರುವೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 58

ಒಡೆಯನೇ ಕಾಯವ ತ್ಯಜಿಸಿದಾದಿನದಿಂದ
ಬಿಡದೆ ಮೂರು ದಿವಸ ಜಾತ್ರೆ ನಡೆದುದಲ್ಲಿ
ನುಡಿಯನೇಳಿದ ನಿನ್ನಯ ಮಾತು ಸತ್ಯವಾಯಿತು
ಅಡಿಗಡಿಗೆ ನಿನ್ನ ಮಹಿಮೆ ಹೇಳುವುದಸಾಧ್ಯ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 59

ಭಕ್ತ ಜನಗಳ ಪೊರೆದ ಸ್ಥಳದೊಳೀಗಲೂ ಸಹಾ
ಭಕ್ತಿ ಮುಕ್ತಿಯ ನೀಡುವಂತ ಮೂರ್ತಿ ಸ್ಥಾಪಿಸಿ
ಶಕ್ತ್ಯಗನುಸಾರವಾಗಿ ನಿತ್ಯ ಪೂಜೆ ನಡೆಸುತಾ
ಯುಕ್ತಿಯಿಂದಲಿ ಬೇಡುವರು ಭಕ್ತಜನಗಳು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 60

ಈಗ ನಿನ್ನಯ ಮೂರ್ತಿ ಪೂಜೆ ನಿತ್ಯ ನಡೆಸುತ
ಸಾಗಿಭಕ್ತರು ಬಂದು ನಿನ್ನ ಮೂರ್ತಿ ದರ್ಶಿಸೆ
ರೋಗ ರುಜಿನಗಳೆಲ್ಲ ಹರಿದು ಹೋಗುತಲಿ ಬಂದು
ನೀಗಿಸುವೆ ದುಃಖಗಳ ಭಕ್ತರ ಮನದಿ ನಿಂದು
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 61

ಇಂದು ನೋಡಿರಿ ತಾಂಜನದಿಯ ದಡದೊಳಿಹ
ಮಂದಿರದ ಮುಂದಿರುವ ಬಿಸಿನೀರಿನ ಸ್ನಾನ
ವಿಂದು ಮಾಡಲು ಸಕಲ ರೋಗಗಳು ವಾಸಿಯಾಗುತ
ಚಂದ ಚಂದದ ಕಳೆಯುಬರುವುದು ನಿತ್ಯ ಸೇವಿಸೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 62

ದೇಶದೇಶಗಳಲ್ಲಿ ನಿನ್ನಯ ಭಕ್ತರಿಹರು
ಈಶ ನೀನೇ ಎಂದು ಜಗದಿ ನಿತ್ಯ ಪೂಜಿಪರೂ
ಕ್ಲೇಶ ಹರಿದ ಭಕ್ತ ಜನಗಳ ಹೃದಯದಲಿ ನಿಂದು
ಪಾಶ ಹರಿಸಿದೆ ಈಶ ಸದ್ಗುರು ದೇವನೇ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 63

ಸತ್ಯದಲಿ ನಡೆವಂತೆನ್ನ ಚಿತ್ತದೊಳು ನಿಂತೆ
ನಿತ್ಯ ನಿನ್ನಯ ನಾಮವನು ಹಾಡಿ ನಲಿಸಿದೆಯೂ
ಉತ್ತಮ ಯೋಗಾಭ್ಯಾಸದಿ ಎನ್ನಮನ ನಿಲಿಸಿ
ನಿತ್ಯ ಚಿತ್ ಸೂರ್ಯನಲಿ ಬೆರೆವಂತೆ ಮಾಡಿದೆ
ಶ್ರೀ ನಿತ್ಯಾನಂದ ಗುರುದೇವ ತವಸುಪ್ರಭಾತ 64

ಮಂಗಳಕೆ ಮಂಗಳವು ಗುರುದೇವ ಚರಣಕೇ
ಮಂಗಳಕೆ ಮಂಗಳವು ನಿಜಶುದ್ಧ ಯತಿವರಗೆ
ಮಂಗಳಕೆ ಮಂಗಳವು ಯೋಗೀಂದ್ರ ರಾಜನಿಗೆ
ಮಂಗಳಕೆ ಮಂಗಳವು ನಿತ್ಯಾನಂದರಿಗೇ
ಮಂಗಳಕೆ ಮಂಗಳವು ಅವಧೂತ ಚರಣಕೇ
ಮಂಗಳಕೆ ಮಂಗಳವು ಕರೀಂಪೀರಚಂದ್ರರಿಗೆ
ಮಂಗಳಕೆ ಮಂಗಳವು ಓಂಕಾರ ರೂಪನಿಗೆ
ಮಂಗಳಕೆ ಮಂಗಳವು ವಿಶ್ವರೂಪನಿಗೆ
ಮಂಗಳಕೆ ಮಂಗಳವು ಚಿದ್ಬಯಲು ತೋರಿದಗೆ
ಮಂಗಳವ ನೀಡಯ್ಯಾ ಗೋವಿಂದನಾನುಡಿಗೆ
ಗೋವಿಂದನಾನುಡಿಗೆ
ಗೋವಿಂದನಾನುಡಿಗೆ

## ಶ್ರೀ ಕೆಂಚಾವಧೂತರ ಮಂಗಳಾರತಿ

ಮಂಗಳಾರತಿ ಎತ್ತಿರೇ ಕೆಂಚಾವ ದೂತಗೇ
ಮಂಗಳಾರತಿ ಎತ್ತಿರೇ ॥ ಪ ॥

ಮಂಗಳಾರತಿ ಎತ್ತಿ ಮಹ ಮಹಿಮೆಯ ತೋರಿ
ಲಿಂಗಾದೊಳ್ಳೈಕ್ಯಾದ ಕೆಂಚಾವ ಧೂತಗೇ ॥ ಅನುಪ ॥

ರುದ್ರಮುನಿ ಗುರುದೇವನಾ ಆಶೀರ್ವಾದದಿ
ಶ್ರದ್ಧೆಯಿಂದಲಿ ತಪವ ಮಾಡಿದ ಗುರುವಿಗೆ
ಕ್ಷುದ್ರಗುಣಗಳಾ ಕಳೆದು ಶ್ರದ್ಧಾಭಕ್ತಿಲಿ ನಡೆದೂ
ಚಿದ್ರೂಪ ಗುರುವೇ ತಾನಾಗಿ ಮೆರೆದವಗೇ || ಮಂಗಳಾ ||

ಲಿಂಗಾಂಗಿ ವಂಶದಲ್ಲಿ ಜನಿಸಿದಾಗುರುವು
ಮಂಗಳ ಮಯನಾಗಿ ಲಿಂಗವೇ ತಾನಾಗಿ
ಕಂಗಳ ಮಧ್ಯದಿ ದೃಷ್ಠಿಯ ನಿಲ್ಲಿಸಿ
ತಿಂಗಳ ಬೆಳಕಿನಲ್ಲಾಡಿದ ಗುರುವಿಗೇ || ಮಂಗಳಾ ||

ನಿತ್ಯವೂ ದನಗಳ ಕಾಯುತ್ತಿರಲೂ
ಸತ್ಯವ ಬಿಡದಂತೆ ಉತ್ತಮ ಹಾದಿಲಿ
ಚಿತ್ತದಿ ಗುರುವಾಜ್ಞೆ ಮನದಲಿ ಸ್ಮರಿಸುತ್ತಾ
ಉತ್ತಮ ಜನರೀಗೆ ಜ್ಞಾನವ ನೀಡಿದಾ ಗುರುವಿಗೆ || ಮಂಗಳಾ ||

ಅಷ್ಠಸಿದ್ಧಿಗಳೊಡೆಯ ಕೆಂಚಾವಧೂತಾ
ಕಷ್ಠದಿಂದಲಿ ದುಡಿದೂ ನಷ್ಠಪಾತಕನಾಗಿ
ಶ್ರೇಷ್ಠವಾದ ಬ್ರಹ್ಮ ಪದವಿಯ ಪಡಕೊಂಡು
ಅಷ್ಠಪಾಶವ ಹರಿದು ನಿಷ್ಠೆನಿಲಿಸಿದ ಯತಿಗೆ || ಮಂಗಳಾ ||

ರಾಗದ್ವೇಶವ ಮರೆತ ಯೋಗಿಯ ವಾಸವು
ಈಗಲೂ ಕೊಳಹಾಳು ಕ್ಷೇತ್ರ ವೆನಿಸಿಹುದೂ
ನಾಗರಾಜನ ಕೃಪೆಯಿಂದ ಭಕ್ತರು ನಿತ್ಯ
ಯೋಗಿ ಕರೀಂಪೀರನು ಗೋವಿಂದಗೇಳಿದ || ಮಂಗಳಾ ||

ಈ ಕಿರು ಹೊತ್ತಿಗೆಯು ಶುದ್ಧ ಅದ್ವೈತ ಪ್ರತಿ ಪಾದಿತವಾಗಿ ಅಕ್ಷರ ಬ್ರಹ್ಮ ಎಂಬ ವಿಚಾರವನ್ನು ಪ್ರತಿಪಾದಿಸುವ ಗ್ರಂಥವಾಗಿದೆ. ಇದರಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಮೂಡಿಸುವಂತಹ ತತ್ವ. ಅಷ್ಟಕ. ಸುಪ್ರಭಾತದಿಂದ ಕೂಡಿದ್ದು ಸಾಧಕರಿಗೆ ಅತ್ಯಾವಶ್ಯಕವಾಗಿ ಬೇಕಾಗಿರುವ ಗ್ರಂಥವಾಗಿದೆ.

ಈ ಗ್ರಂಥವು ಜನಸಾಮಾನ್ಯರಿಗೆ ದೊರೆತು ಇದರ ಉಪಯೋಗವನ್ನು ಪ್ರತಿಯೊಬ್ಬರೂ ಪಡೆದುಕೊಳ್ಳ ಬೇಕೆಂಬುದೇ ನಮ್ಮ ಬಯಕೆ. ನನ್ನ ಪೂಜ್ಯ ಮಾತಾಪಿತೃಗಳಾದ ಶ್ರೀಮತಿ ಜಡಾವದೇವಿ ಮತ್ತು ಶ್ರೀ ತಾರಾಚಂದ್ ಬಾಫ್ನ ಇವರ ಮನಸ್ಸಿಗೆ ಶಾಂತಿಯನ್ನು ಶ್ರೀ ಗುರುಗಳು ದಯಪಾಲಿಸಲೆಂದು ಇವರ ಸವಿನೆನಪಿಗಾಗಿ ನನ್ನ ಸ್ವಂತ ಖರ್ಚಿನಿಂದ ಮುದ್ರಣ ಮಾಡಿಸಿ ಕೊಟ್ಟಿರುತ್ತೇನೆ.

ಇದರಲ್ಲಿ ಬರುವ ಆದಾಯುವು ಧರ್ಮಕಾರ್ಯಗಳಿಗೆ ವಿನಿಯೋಗವಾಗುವುದು. ಇಂಥಾ ಧರ್ಮಕಾರ್ಯಕ್ಕೆ ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಪರಮಪೂಜ್ಯರಾದ ಶ್ರೀ ಶ್ರೀ ಶ್ರೀ ನಿತ್ಯಾನಂದ ಅವಧೂತರ ಚರಣಕಮಲಗಳಿಗೂ, ಶ್ರೀ ಶ್ರೀ ರಾಜಯೋಗಿ ಕರೀಂಪೀರ ಚಂದ್ರರವರ ಚರಣಕಮಲಗಳಿಗೂ ಹಾಗೂ ಶ್ರೀಮಾನ್ ಗೋವಿಂದಪ್ಪರವ ಚರಣಕಮಲಗಳಿಗೂ ನನ್ನ ಅನಂತ ವಂದನೆಗಳನ್ನು ಅರ್ಪಿಸುತ್ತೇನೆ

ದಿನಾಂಕ : 23-12-95

ಇಂತಿ

**ಟಿ. ಕಾಂತಿಲಾಲ್**

ರಾಜ್‌ಕುಮಾರ್ ಅಂಡ್ ಕೋ

ಪ್ರಧಾನರಸ್ತೆ, ಹಿರಿಯೂರು ಟೌನ್

ದೂರವಾಣಿ ಸಂಖ್ಯೆ - 7755. 76



ಶ್ರೀ ಶ್ರೀ ಶ್ರೀ ರಾಜಯೋಗಿ ಕರಿಂಜೀರ್ ಚಂದ್ರರು